॥ ಜಯಗುರು ಶಂಕರಭಗವನ್ ॥

ನಿತ್ಯನಿರತಿಶಯಾನಂದವನ್ನುಂಟುಮಾಡುವ

ಪರಮಾತ್ಮನ ಸ್ವರೂಪವನ್ನು ತೋರಿಸುವ

  

# ಶಂಕರಾನಂದ ಪದ್ಧತಿ

ಈ ವೇದಾಂತ ಗ್ರಂಥಕರ್ತರು

ಮೈಸೂರು ವೇದಾಂತ ಶಿವರಾಮಶಾಸ್ತ್ರಿಗಳೆಂಬ

ಶಂಕರದಾಸರು



ಪ್ರಕಾಶಕರು

ಗೋಪಾಲಶೆಟ್ಟಿ ಸನ್ಸ್

ಶಂಕರಾನಂದ ಬುಕ್ ಡಿಪೊ

"ಶಾಂತಿನಿವಾಸ್"

೬ ನೆ ಕ್ರಾಸ್ ಹೊಸಕೇರಿ ಮೈಸೂರು ೪

 ಬೆಲೆ: ರೂ. 1-50




ಜಯಗುರು ಶಂಕರಭಗವನ್



# ಶಂಕರಾನಂದ ಪದ್ಧತಿ

ಶರಣುಸತ್ಯಾನಾದಿನಿರ್ಮಲ । ಶರಣುನಿಜಸುಖನಿಸ್ತುಲ । ಶರಣು ಚಿತ್ಸುಖನಿರಾಕುಲ । ಶರಣುಘನಮಹಿಮೋಜ್ಜ್ವಲ । ಶರಣು ರಣೂ ॥ ಪಲ್ಲವಿ ॥

ಶರಣು ಹರಿಹರದೇವವಂದಿತ । ಶರಣು ನಿಜಸುಖರಂಜಿತ । ಶರಣು ಯೋಗಿಕುಲೇಂದ್ರವಂದಿತ । ಶರಣು ಗುಣಮಣಿಮಂಡಿತ । ಶರಣು ರಣು ॥ ೧ ॥ ಶರಣುಹೃದಯಾಂಭೋಜಮಂದಿರ । ಶರಣು ನಿರುಪಮ ಂದರ । ಶರಣುತತ್ವಾಂಭೋಧಿಮಂದಿರ । ಶರಣುಘನಸುಖಕಂದರ । ರಣು ಶರಣೂ ॥ ೨ ॥

ಶರಣು ಚರಣಾಶ್ರಿತಶುಭಂಕರ । ಶರಣು ಭೇದಭಯಂಕರ । ಶರಣು ರ್ಣದೃಗ್ವಶಂಕರ । ಶರಣುಶ್ರೀಗುರುಶಂಕರ । ಶರಣು ಶರಣೂ ॥ ೩ ॥

೨

ಭಜಿಸುಬಿಡದೆ ಗುರುನಾಥನ ನೀ । ತ್ಯಜಿಸಲೊಯೆರಡೆಂಬಮಾತನ । ಭಜಿಸುಬಿಡದೆ ಗುರುನಾಥನ ॥ ಪಲ್ಲವಿ ॥

ಹಿಂದುಮುಂದುಕಾಣದೆಮ್ಮ । ಬಂಧನವಬಿಡಿಸಿ ನಿತ್ಯಾನಂದವ ತೋರಿದ ನಿಜತಾತನ ॥ ಭಜಿಸುಬಿಡದೆ ಗುರುನಾಥನ ॥ ೧ ॥ ನಿಜವನರಿಯದಿರಲುಪುಟ್ಟಿ । ಅಜನಸೃಷ್ಟಿಯಿಂದಬಂದ । ರುಜೆಯು ಕೆಡಿಸಿದಪರಮಾತ್ಮನ । ನೀಭಜಿಸು ಬಿಡದೆ ಗುರುನಾಥನ ॥ ೨ ॥ ಅಲ್ಲಿಯಿಲ್ಲಿಯೆಂಬಸೊಲ್ಲ । ಸುಳ್ಳುಮಾಡಿದೆಪುಣ್ಯ ಪಾಪ । ವಿಲ್ಲದಂತೆ ಗೈದಮಾಯಾತೀತನ । ನೀಭಜಿಸುಬಿಡದೆ ಗುರುನಾಥನ ॥ ೩ ॥ ತೋರಿಕೆಡುವದೃಶ್ಯವನ್ನು । ವಿೂರಲಿಚ್ಛೆಯುಳ್ಳ ಅಧಿ । ಕಾರಿಪುರುಷಪುಣ್ಯಪಾರಿಜಾತನ ॥ ನೀಭಜಿಸುಬಿಡದೆ ಗುರುನಾಥನ ॥ ೪ ॥ ಶಂಕೆಯನ್ನುಹರಿಸಿ ಗುರುಶಂಕರಾರ್ಯನೆನಿಸಿ ಜನ್ಮ । ಸಂಕಟವಕೆಡಿಸಿದಮಳಾತ್ಮನ। ನೀಭಜಿಸುಬಿಡದೆ ಗುರುನಾಥನ ॥ ೫ ॥

೩

ಗುರುದೇವನೀನೋರ್ವನಿಜದೇವನೈ । ನಿನ್ನ ಚರಣದೊಳ್ಬೆರೆಯದ । ನರನೆಪಾಮರನೈ । ಗುರುದೇವನೀನೋರ್ವನಿಜದೇವನೈ ॥ ಪಲ್ಲವಿ ॥

ತಿರುಕನಂದದಿಪುರಪುರಗಳ ತಿರುಗುತ । ನರಳುವತರುಳನ । ಹರನ ವಿೂರಿಸಿದೈ ॥ ಗುರುದೇವನೀನೋರ್ವನಿಜದೇವನೈ ॥ ೧ ॥ ಕರಣವಕರಗಿಸಿ । ಮರುಗಿದಮುನಿಗಳು । ಅರಸಿತಾವರಿಯದತೋರಿಸಿದೈ ॥ ಗುರುದೇವ ನೀನೋರ್ವನಿಜದೇವನೈ ॥ ೨ ॥ ಗುರುಶಂಕರಾರ್ಯನೆ । ಕರುಣತೋರಲುತಾನೆ। ಗುರುವೆಂಬನಾಮವ । ಧರಿಸಿಬಂದಿಹನೈ ॥ ಗುರುದೇವನೀನೋರ್ವನಿಜ ದೇವನೈ ॥ ೩ ॥

೪

ತೊಡಗಿದಮರವೆಯಕೆಡಿಸಿ ಮುನ್ನಿನೊಡಲಿನತೊಡಕನು ಬಿಡಿಸಿ ಕರ್ಮಕ್ಕೊಡೆಯದ ಕವಚವ ತೊಡಿಸಿ ಮುಂದೆ ಪೊಡವಿಯೊಳವರಿವ ರೊಡಗೂಡಿಮಾಡುವ ಕೆಡುತನಗಳನೆಲ್ಲ ಗುಡಿಸಿವೋವೀರನ ॥ ಮಾಡಿದೈ ಶ್ರೀಗುರುವೆ ಮಾಡಿದೈ ॥ ೧ ॥ ಮರಣಭೀತಿಯಕೊಚ್ಚಿಕೇರಿ ದೊಡ್ಡ ಸುರ ಪದಂಗಳನೆಲ್ಲತೂರಿ ದುಃಖಬೆರೆಯದಾನಂದವತೋರಿ ಮುಂದೆ ದುರುಳ ರಂತರದದುಃಖದುರಿಬಂದುಕವಿದರು ಕರಗದೆಕರಿಯಕಲ್ಲರೆಯಂತೆ ಚಿತ್ತವ ಮಾಡಿದೈ ಶ್ರೀಗುರುವೇ ॥ ೨ ॥ ಬಂಧನಬಂದಬಗೆಯನು ಕರ್ಮದಿಂದದು

ಕೆಡದಪರಿಯನು ನಿಜಾನಂದದೊಳಿರುವಸಾರವನು ತೋರಿ ಸಂದಿಗೊಂದಿ ನೊಳಿರ್ದ ಸಂದೇಹಂಗಳಕೊಂದು ತಂದೆಗುರುಶಂಕರನೋಳ್ ಹೊಂದಿ ಬೆಳಗು ವಂತೆ ಮಾಡಿದೈ ಶ್ರೀಗುರುವೇ ॥ ೩ ॥

೫

ಗುರುಪಾದದೊಳು ಮನವಿಂಗಿ ಬಂಧತೊರದುಪೋಯಿತು ನೋಡೆ ತಂಗಿ । ಹೊರಗೆಂಬವಳಗೆಂಬಹೊರವಳಸಂದೆಂಬ ಬಿರುಕಿನೊಳೆನ್ನತುಂಬಿರು ವಂತೆಮಾಡಿದ ॥ ಪಲ್ಲವಿ ॥ ತಾಪಕೋಪಂಗಳಕೆಡಿಸಿ ಬಳಿಕರೂಪು ನಾಮಂಗಳ ಸುಡಿಸಿ ಧೂಪದೀಪಗಳೆಂಬಾರೋಪವೆಲ್ಲವನು ನಿರ್ಲೇಪವೆನಿಸಿ ನೀಚಿದ್ರೂಪ ನೆಂದರುಪಿದ ॥ ಗುರುಪಾದದೊಳುಮನವಿಂಗಿ ॥ ೧ ॥ ತನ್ನಾನಂದದಸಾರ ಬೆಸಗಿ ಮನವಿನ್ನೆಲ್ಲುಪೋಗದಂತೆಸಗಿ । ಭಿನ್ನವೆಂಬುವನುಡಿ ಶೂನ್ಯವಾಯಿತು ಯೆಂಬ ಎನ್ನಲ್ಲಿಯೇಜಗವನ್ನೆಲ್ಲತೋರಿದ । ಗುರುಪಾದದೊಳುಮನವಿಂಗಿ ॥ ಗುರುವೆಂಬನಾಮವಧರಿಸಿ ಹೊಟ್ಟೆಹೊರೆಯುವ ಜನ್ಮವಹರಿಸಿ ಹರುಷವ ನೇರಿಸಿ ಹರನೊಳುಸೇರಿಸಿ ಮರಣಜನ್ಮಗಳ ಗೋಚರಿಸದಂತೆಸಗಿದ ॥ ಗುರು ಪಾದದೊಳುಮನವಿಂಗಿ ॥ ೩ ॥ ಮೂರು ಮೂರ್ತಿಗಳಲ್ಲುಕೂಡಿ ನಾಸೇರಿ ಕೊಂಡಿರುವಂತೆಮಾಡಿ । ತೋರುವ ಬಗೆಯುನು ತೋರಿಸಿ ನಮ್ಮಲ್ಲೇ ತೋರಿಸಿ ಬೇರೇನುತೋರದಂತೆಸಗಿದ । ಗುರುಪಾದದೊಳುಮನವಿಂಗಿ ॥ ೪ ॥ ಮರಣಜನ್ಮಂಗಳಸುಟ್ಟು ನಿಜಗುರುದೋಷಕರಿಗದಕೊಟ್ಟು । ಮರವೆಯು ಬೇರಿಟ್ಟು ಅರುಹಿಗೆಬೇರಿಟ್ಟು ಗುರುಶಂಕರನ ಗುಟ್ಟುಅರಿಯುದವನಬಿಟ್ಟು ॥ ಗುರುಪಾದದೊಳುಮನವಿಂಗಿ ॥ ೫ ॥

೬

ಅಂಬನೀನೆಜಾಣೆ ನಂಬಿದೆನುಕಾಣೆ ಇಂಬಿಲ್ಲದೆಲೋಕವಾಗಿ ತುಂಬಿಕೊಂಡೆ ನೀನೆ ॥ ಪಲ್ಲವಿ ॥ ನಿನ್ನ ಕೂಡಿದಾಭಾಸತಾನೀಶನಾದ ಕಾಣೆ । ನಿನ್ನ ತಿಳಿದ ಮೇಲೆ ಜನ್ಮಪಾಶವಿನ್ನುಂಟೇನೆ । ಅಂಬನೀನೆಜಾಣೆ ॥ ೧ ॥ ಮಾಯೆಯೆಂದು ಪೇಳಿನಿನ್ನ ತಾಯಿಯಿಂದೊಡೇನೆ । ಮಾಯೆಯೆಂದು ಪೇಳುವಲ್ಲಿಕಾಯು ವಿಲ್ಲಕಾಣೆ । ಅಂಬನೀನೆಜಾಣೆ । ಅಲ್ಲಿಇಲ್ಲಿ ತೋರಿತೆಂಬುದೆಲ್ಲಾ ನೀನೆ ಕಾಣೆ । ಇಲ್ಲವುಂಟಲ್ಲೆಂಬುದಲ್ಲದವಳು ನೀನೆಕಾಣೆ ಅಂಬನೀನೇ ಜಾಣೆ ॥ ೩ ॥ ಹೊನ್ನು

ಹೆಣ್ಣು ಸಂಪತ್ತಿದು ನಿನ್ನಮಹಿಮೆಕಾಣೇ ನನ್ನೊಳುನೀನಿರ್ದಮೇಲೆ ಭಿನ್ನ ವಿನ್ನುಂಟೇನೇ ॥ ಅಂಬಾನೀನೇಜಾಣೆ ॥ ೪ ॥ ಮರೆತು ನಿನ್ನ ಕಾರ್ಯವನ್ನು ಮರಣವಾಯ್ತುಕಾಣೆ । ಗುರುಶಂಕರನೊಳ್ಕೂಡಿ ನೀನೆಪರಿಪರಿಯಾದೆಕಾಣೆ ॥ ಅಂಬನೀನೆಜಾಣೆ ।

೭

ಎಂತುಮುಕ್ತನಾಗಬೇಕಣ್ಣಾ ಇಂತಾದಮೇಲ್ತಾನೆಂತು ಮುಕ್ತನಾಗ ಬೇಕಣ್ಣಾ । ಕಂತೆಬೊಂತೆಗೆಚಿಂತೆ ರೋಗದಚಿಂತೆ ಮುಪ್ಪಿನಚಿಂತೆ ಬಡತನದ ಚಿಂತೆ ಸತ್ತರೆಚಿಂತೆ ಈಪರಿ ಚಿಂತೆಯೆಂಬೀ ಸಂತೆಯೊಳ್ತಾನೆಂತು ॥ ಪಲ್ಲವಿ ॥

ಚಿಕ್ಕಪುಟ್ಟವರಿಲ್ಲದಿಹಚಿಂತೆ ನೆರೆಹೊರೆಯುಮನೆಯೊಳು ಒಕ್ಕಲಿರುವರ ಮಾತುಗಳಚಿಂತೆ । ಮಕ್ಕಳಾಗದಚಿಂತೆ ಬಳಿಕಾ ಮಕ್ಕಳಿಗೆ ದಿಕ್ಕೆಂಬ ಚಿಂತೆಯು । ಮಕ್ಕಳಿಲ್ಲಾ ವಕ್ಕಲೋಗಲು ಬಿಕ್ಕಿ ಬಿಕ್ಕಿ ಅಳುವ ಚಿಂತೆಯೊ । ಳೆಂತು ಮುಕ್ತನಾಗಬೇಕಣ್ಣಾ ಇಂತಾದಮೇಲ್ತಾನೆಂತು ॥ ೧ ॥ ಹೋಮನೇಮ ಸ್ನಾನಗಳಚಿಂತೆ ಮನದೊಳಗೆ ಪುಟ್ಟುವ ಕಾಮಿತಾರ್ಥಗಳಿಲ್ಲದಿಹಚಿಂತೆ ಭಾಮೆ ಯಿಲ್ಲದಚಿಂತೆ ಭಾಮಿಗೆಪ್ರೇಮವಿಲ್ಲದಚಿಂತೆ । ಪ್ರೇಮಕೆ ಹೇಮವಿಲ್ಲದಚಿಂತೆ ಹೇಮಕೆ ಭೂಮಿಯಿಲ್ಲದಚಿಂತೆಯೊಳು ತಾ । ನೆಂತುಮುಕ್ತನಾಗಬೇಕಣ್ಣಾ ॥ ದಿಕ್ಕುತೋರದೆದುಃಖಿಸುವಚಿಂತೆ ಗುರುಶಂಕರಾರ್ಯನ ಸಿಕ್ಕುತಿಳಿಯದೆ ಲೆಕ್ಕಿಸುವಚಿಂತೆ । ಅಕ್ಕಿಯಿಲ್ಲದಚಿಂತೆ ಅಕ್ಕಿಗೆ ರೊಕ್ಕವಿಲ್ಲದಚಿಂತೆ ರೊಕ್ಕವು ಸಿಕ್ಕಲಿಲ್ಲದಚಿಂತೆ ಸಿಕ್ಕಲುಮುಕ್ಕ ತಾನಾಗಿರುವಚಿಂತೆ ಚಿಂತೆಯೊಳೆಂತು ಮುಕ್ತ ನಾಗಬೇಕಣ್ಣ ಇಂತಾದಮೇಲ್ತಾ ॥

೮

ಏಕೆಭ್ರಮಿಸಿ ವರಿಸಿ ಧರಿಸಿ ಜನಿಸಿ ಸಾಯುವೇ । ಸಾಕು ಸದ್ಗುರುವ ಪಿಡಿಯೋ ಬ್ರಹ್ಮನಾಗುವೆ ॥ ಪಲ್ಲವಿ ॥

ಒಡಲಪಿಡಿದುಬರಿದೆ ಭ್ರಮಿಸಿಕೆಡುವಜೀವನು । ಒಡಲಕಳೆದು ತನ್ನ ತಿಳಿದೊಡವನೆಪರಮನು । ಏಕೆಭ್ರಮಿಸಿವರಿಸಿಧರಿಸಿ ಜನಿಸಿಸಾಯುವೇ ॥ ೧ ॥ ಇಂದುನಾಳೆಯೆಂಬುಮತಿಯು ಬಂಧುವೆನಿಪುದು । ಬೆಂದುಪೋದನರಶರೀರ ಮುಂದೆಜನಿಸದು ॥ ಏಕೆಭ್ರಮಿಸಿವರಿಸಿಧರಿಸಿಜನಿಸಿಸಾಯುವೆ ॥ ೨ ॥

ನೀನೆನಿನಗೆಮಿತ್ರನಲ್ಲದನ್ಯರಿಲ್ಲವು । ನೀನೆನಿನ್ನಸೆರೆಯಬಿಡಿಸಬೇಕುಸತ್ಯವೂ ॥ ಏಕೆಭ್ರಮಿಸಿವರಿಸಿಧರಿಸಿ ಜನಿಸಿಸಾಯುವೆ ॥ ೩ ॥ ಜಗವು ಜನಿಸಿದಂದವರಿಯು ದವನತನುವಿದು ॥ ಬಗೆಯಕಮ್ಮಾರಕರದಪಿಡಿದತಿದಿಯದು ॥ ಏಕೆಭ್ರಮಿಸಿ ವರಿಸಿಧರಿಸಿಜನಿಸಿಸಾಯುವೆ ॥೪॥ ತನ್ನೊಳಿಹುದುದೃಷ್ಟಿಬೀಜತನ್ನತಿಳಿದೊಡೆ । ಭಿನ್ನವೆಂದೊಡಿಲ್ಲನೋಡಭವಕೆನಿಲುಗಡೇ ॥ ಏಕೆಭ್ರಮಿಸಿವರಿಧರಿಸಿಜನಿಸಿ ಸಾಯುವೆ ॥ ೫ ॥ ಜ್ಞಾನವಿಲ್ಲದವನಪೂಜೆಸುಕ್ರಿಯವೆನಿಸದು ಶ್ವಾನಸುರತ ದಂತೆತುದಿಗೆ ಬಂಧವೆನಿಪುದು ॥ ಏಕೆಭ್ರಮಿಸಿವರಿಸಿಧರಿಸಿಜನಿಸಿ ಸಾಯುವೇ ॥ ೬ ॥ ಸೇರಿಶಂಕೆಯಲಿ ಭ್ರಮಿಸಿಕೆಡುವಮನಸಿಗೆ । ತೋರುಶಂಕರಾರ್ಯ ನಡೆಯುಮರಳಿ ಧರಣಿಗೆ ॥ ಏಕೆಭ್ರಮಿಸಿವರಿಸಿಧರಿಸಿಸಾಯುವೆ ॥ ೭ ॥

೯

## ಕಂದಾರ್ಥ

ಪಂಚಾಗ್ನಿಯೊಳಗೆ ತಪಿಸುವ ವಂಚಕರಮನಕ್ಕೆಮನವನೀಯದೆ ತೊಡ ಗಿದಕಂಚುಕವಹಕೋಶಂಗಳಪಂಚಕವನು ಕಡೆದುನೋಡೈ ಹೊಂಚಿ ನಿನ್ನಲಿ । ಮಿಂಚುವುದು ಪ್ರಪಂಚನೋಡಲ್ಲಿ ಪಂಚವಿಧದನಿನ್ನ ಲಾಂಛನವರಿದೊಡೆ ಸಂಚಿತವಳಿದು ಪ್ರಪಂಚಹಾರಿವಿರಿಂಚಿಯೆನಿಸುವೆ ಚಿತ್ಸುಖವೆಂಬ ಮಂಚ ದೊಳಿರುವೆ ॥ ೧ ॥

ವ್ಯರ್ಥವಮಾಡದೆದೇಹವ ಮಿಥ್ಯಾಕರ್ಮದಲಿ ಬಳಸಿಬಳಲದೆ ಮತ್ತೀ ಮರ್ತ್ಯಕೆಬಾರದತೆರದಲಿ ಸತ್ಯಾರ್ಥವತಿಳಿದುನೋಡು । ತತ್ವಜ್ಞರಲ್ಲಿ । ಗೊತ್ತಹುದನಿತ್ಯತ್ವನಿನ್ನಲ್ಲಿ ಸತ್ತುಚಿತ್ತಾನಂದನಿತ್ಯಾಖಂಡವು ಎಂಬತತ್ವ ನೀನಾಗಿ ಸರ್ವೋತ್ತಮನೆನಿಸಿ ನಿಶ್ಚಿತ್ತನಾಗಿರುವೆ ಪೇಳಿಹುದಿದು ತತ್ವಮಸಿ ಯೊಳಗೆ ॥ ೨ ॥

ಪರಿಪರಿಲೋಕವಸುತ್ತಿದೆ ಪರಿಪರಿತೀರ್ಥದಲಿ ಮುಳುಗಿ ಬಳಲಿದೆ ಬರಿದೇ ಪರಿಪರಿಯಾಗುವಚಿತ್ತಕೆ ಚರಶಕ್ತಿಯಕೊಟ್ಟೆನಿಜವ । ನರಿಯದೆ ಪೋದೆ । ಪರಿಪರಿಯೋನಿಸೆರೆಗೊಳಗಾದೆ । ಬೆರೆಯದೆ ನೀ ಮುಂದಾದರು ಪುಸಿಯೊಳುನಿಜವರಿತು ನಿಶ್ಚಲದಿನಿಂದಿರು ನಿತ್ಯಾನಂದ ಶ್ರೀ ಶರಧಿಮಧ್ಯ ದೊಳು ದೊರೆಯುವದಿದು ಗುರುಶಂಕರನೊಳು ॥ ೩ ॥

೧೦

ಸಾರುಸಾರ್ಸ್ಸಂಸಾರವೆಲ್ಲಿ ತೂರಿಸೇರ್ನಿಸ್ಸಂಗದಲ್ಲಿ । ಬೇರೆಗತಿಯೆಂಬುವು ವುದಿನ್ನಿಲ್ಲಿ । ತೋರದಲ್ಲೆಲ್ಲಿ । ಮೂರುನಿಮಿಷದಾಟದಲ್ಲಿ ತೋರಿಕೆಡುವ ಕಾಯದಲ್ಲಿ । ಸೇರಿಸುಖಿಯೆಂಬುವನ್ಯಾರಿಲ್ಲಿ ತೋರಿಸುವನಲ್ಲಿ । ಸಾರುಸಾ ರ್ಸ್ಸಂಸಾರವೆಲ್ಲಿ ॥ ಪಲ್ಲವಿ ॥

ಎಷ್ಟುನರರಾಳಿದರೀಧರೆಯೊಳ್ ಎಷ್ಟು ಮುಂದಾಳುವರಾಪರಿ ಯೊಳ್ । ಅಷ್ಟರಳಿದರಳಿಯುದುಳಿವೀಸೃಸ್ಟ್ಯಾಕೃತಿಯೊಳು । ಕಟ್ಟಕಡೆ ಯೊಳೆಲ್ಲ ಕೆಟ್ಟುನಷ್ಟವಾಗಿಪೋಗಲಿನ್ನು ಪುಟ್ಟಿದವರೋಳ್ ನಷ್ಟನಾಗದ ದಿಟ್ಟ ನಾರುಂಟು ॥ ಸಾರು ॥ ೧ ॥

ನೂರುಕಲ್ಪಾಯುವಕೂಡಿರ್ದ ಮೇರುಶಿಖರಾಗ್ರವನೇರಿರ್ದ ಸೇರಿಗ ಗನಾಂಡವಕೂಡಿರ್ದ ತನುಜಾಲಗಳೆಲ್ಲಾ ॥ ಬೇರುಕಡಿದಮೇಲೆ ವೃಕ್ಷ ಜಾರುವಂತೆ ಕರ್ಮಕ್ಷಯದಿಂ ಮಿರಿಕೆಡಲೀನರದೇಹಕೆ ಸುಸ್ಥಿರವೆಂಬುವು ದುಂಟೇ ॥ ಸಾರು ॥ ೨ ॥

ಕರಣವಿರುವತನಕ ನೀನು ಮರಣಜನ್ಮಂಗಳ ವಾರ್ತೆಯನಂಧರಿಸ ಬೇಕೆಂದಿಗು ತಪ್ಪದುನೀನೆಲ್ಲಿದ್ದೊಡದೇನೈ । ಪರಮಗುರುಶಂಕರನಂಘ್ರಿಯನು ಬೆರೆತುಮರತಾಗಲೆದೃಶ್ಯವನು ನಿರುತನಿತ್ಯಾಖಂಡಾನಂದಾಂಬುಧಿಯಾಗುವೆ ॥ ನೀನು ಸಾರುಪಾರ್ಸ್ಸಂಸಾರದಲ್ಲಿ ತೋರಿಸೇರ್ನಿಸ್ಸಂಗದಲ್ಲಿ ಬೇರೆಗತಿಯೆಂಬುವ ದಿನ್ನಿಲ್ಲಿತೋರದಲ್ಲೆಲ್ಲಿ ॥ ೩ ॥

೧೧

ಯಾರಿಗುತಿಳಿಯದು ನಮ್ಮೂರು ಸುಖಶಾರವೆಯಾಗಿದೆ ನಮ್ಮೂರು । ಅರಸನೆಲೆಯೇ ನಮ್ಮೂರು ಹದಿಮೂರರಮೇಲಿದೆ ನಮ್ಮೂರು ಯಾರಿ ॥ ೧ ॥

ನಥರಕೂಡದು ನಮ್ಮೂರು ಬಹುನಾಥರಿಗದು ನೆಲೆ ನಮ್ಮೂರು ಮಾತಿಗೆಸಿಲುಕದನಮ್ಮೂರು ಯಮದೂತರಮಾರಿಯು ನಮ್ಮೂರು ಯಾರಿ ॥ ೨ ॥

ಲಕ್ಷ್ಯಕೆ ಸಿಲುಕದ ನಮ್ಮೂರು ಬಹು ಲಕ್ಷಣವಾಗಿದೆ ನಮ್ಮೂರು ।

ಸಾಕ್ಷಿಯುವಿಾರಿದೆ ನಮ್ಮೂರು ಈ ಕುಕ್ಷಿಯೊಳಡಗಿದೆ ನಮ್ಮೂರು ॥ ಯಾರಿ ॥ ೩ ॥

ಕಳದುಳಿಯುವದೇ ನಮ್ಮೂರು ದುರ್ಮಲವಿಲ್ಲದ ನೆಲೆ ನಮ್ಮೂರು । ಕೀಳುಮೇಲಿಲ್ಲವು ನಮ್ಮೂರು ಬಹು ಥಳಥಳಿಸುತಲಿದೆ ನಮ್ಮೂರು ॥ ಯಾರಿ ॥ ॥ ೪ ॥

ಕಣ್ಣಿಗೆಕಾಣದ ನಮ್ಮೂರು ಬಹುಬಣ್ಣಗಳಾಗದು ನಮ್ಮೂರು ಭಿನ್ನವ ವಸುಡುವದು ನಮ್ಮೂರು ಸುರಕಿನ್ನರರರಿಯರು ನಮ್ಮೂರು ॥ ಯಾರಿ ॥ ೫ ॥

ತೋರುವದೆಲ್ಲಾ ನಮ್ಮೂರು ನಿಜಧೀರರಗರುಡಿಯು ನಮ್ಮೂರು ॥ ಯಾರಿ ॥ ೬ ॥

ಸಂಕಟವಿಲ್ಲದ ನಮ್ಮೂರು ಆತಂಕವವಿಾರಿದೆ ನಮ್ಮೂರು ಸುಂಕವ ಕೇಳದು ನಮ್ಮೂರು ಗುರುಶಂಕರನರಮನೆ ನಮ್ಮೂರು ॥ ಯಾರಿ ॥ ೭ ॥

೧೨

ದೇಹವೆನಾನೆಂಬ ಮೋಹವತೋರಿದೆ ಹಾಹಾಮಾಯೆಯು । ಊಹಿಸಲೀ ನನ್ನಸಾಹಸವಳವಲ್ಲ ಹಾಹಾಮಾಯೆಯೆ ॥ ೧ ॥ ಹಂಸನೊಳಿಲ್ಲದ ಸಂಸಾರ ಕೂಡಿದೆ ಹಾಹಾ । ಸಂಶಯಕಟ್ಟಿ ವಿಧ್ವಂಸನ ಮಾಡಿದೆ ಹಾಹಾ ॥ ೨ ॥ ಮರಶಿಲೆಗಳನೆಲ್ಲ ಸುರವರರೆನಿಸಿದೆ ಹಾಹಾ । ಪರಿಪೂರ್ಣನೊಳುಸೇರಿ ಪರಿಪರಿಬಗೆಯಾದೆ ಹಾಹಾ ॥ ೩ ॥ ಜಾತಿಯೆಂಬುದನೊಂದ ಮಾತಿನೋಳ್ ನಿಲಿಸಿದೆ ಹಾಹಾ । ರೀತಿಯಕೆಡಿಸಿಭವಭೀತಿಯತೋರಿದೆ ಹಾಹಾ ॥ ೪ ॥ ಹಿಂದುಮುಂದಿಲ್ಲದೆ ಸಂದಿನೋಳ್ತುರುವೆ ಹಾಹಾ । ಹಿಂದುಮುಂದಿದ್ದಿವ ಬಂದರೆ ಹಾರುವೆ ಹಾಹಾ ॥ ೫ ॥ ಪರಮನೊಳಿಲ್ಲದ ಮರೆಯನೆಮಾಡಿದೆ ಹಾಹಾ । ಶರೀರತೊಡಿಸಿ ಜನ್ಮಸೆರೆಯೊಳುಕೂಡಿದೆ ಹಾಹಾ ॥ ೬ ॥ ಅರಿಯುವೆನೆಂದು ನಿನ್ನ ರಸಲುಪುಸಿಯುಪ್ಪೆ ಹಾಹಾ । ಬರಿಭ್ರಮೆಯಿಂದ ಶ್ರೀ ಗುರುಶಂಕರನೊಳಿರ್ಪೆ ಹಾಹಾ ಮಾಯೆಯೆ । ದೇಹವೆನಾನೆಂಬ ಮೋಹವ ತೋರಿದೆ ಹಾಹಾ ಮಾಯೆಯೆ ॥ ೭ ॥

೧೩

ಜ್ಞಾನವೊಂದಿಲ್ಲದಿನ್ನೇನಿರ್ದೊಡೇನು ಮಿರೆ ಗಾಣದೀ ನಿಶ್ಚಲಾನಂದ ಬೆಳಗುವುದೇ ॥ ಪಲ್ಲವಿ ॥ ರಾಮನಾಮುವಪೇಳಿದಂತೆ ಪಠಿಸುವುದುಶುಕ ।

ಹೇಮಲೋಷ್ಟಗಳ ಸಮದರ್ಶಿಕೇಳ್ಶುನಕ ॥ ತಾವಸವಬಿಟ್ಟಮೌನ ವ್ರತಿಯುತಾನುಬಕ । ಭೂಮಿಯನುಬಳಸುವುದು ಪಕ್ಷಿಕೊನೆತನಕ ॥ ಜ್ಞಾನವೊಂದಿಲ್ಲದಿನ್ನೇನಿರ್ದೋಡೇನು ॥ ೧ ॥ ಮಡದಿ ಮಕ್ಕಳ ಮಮತೆ ಬಿಟ್ಟು ಕ್ರಿಮಿಚರಿಸುವುದು । ಜಡೆಗಳನುಧರಿಸಿ ವಟವೃಕ್ಷತಪಿಸುವುದು । ಎಡೆಬಿಡದೆ ಮತ್ಸ್ಯನೀರೊಳಗೆ ತಾಮುಳುಗಿಹುದು । ಒಡಲಸುಖತೊರೆದ ಬಗೆ ಹುಚ್ಚರೊಳಗಿಹುದು ॥ ಜ್ಞಾನವೊಂದಿಲ್ಲದಿನ್ನೇನಿರ್ದ್ದೊಡೇನು ॥ ೨ ॥ ಪುರವಸೇರದೆ ಕಾಡಿನೊಳು ಚರಿಸುವುದು ನರಿಯು । ಪರಿಪರಿಯ ಪರ್ಣ ಭಕ್ಷಣನೇಮಿಕರಿಯು ॥ ಚರಿಸುವುದು ಗಗನಮಂಡಲದಲ್ಲೆ ತಿತ್ತಿರಿಯು । ಗುರುಶಂಕರನ ಪಿಡಿಯದವನೆ ನರಕುರಿಯು ॥ ಜ್ಞಾನವೊಂದಿಲ್ಲದಿನ್ನೇನಿ ರ್ದೋಡೇನುಮಿತಿ । ಗಾಣದೀನಿಶ್ಚಲಾನಂದ ಬೆಳಗುವುದೇ ॥ ೧೪ ॥

೧೪

ನಾನೆಂಬುವದೊಂದೇ । ಕಾಣುವದಲ್ಲಿ । ನ್ನೇನಿಲ್ಲವೊತಂದೇ ಧ್ಯಾನ ದೋಳ್ ಮೌನದೋಳ್ ಸ್ನಾನಪಾನಂಗಳೋಳ್ । ದಾನದೊಳದರವಿಧಾನ ದೊಳ್ ವಾನನದೊಳ್ನಾನೆಂಬುವದೊಂದೇ ॥ ಪಲ್ಲವಿ ॥ ತನುಜಾಭಿಮಾನ ದೊಳು ಪೇಳುವೆನಾನಾ ॥ ಜನದಭಿಧಾನದೊಳು । ನೆನಸಿನೊಳ್ ಕನಸಿನೊಳು ಮಾನಸಿನಲಯದೊಳು ಮನನದೊಳ್ ಜನನದೊಳ್ ಗಣನೆಯೊಳ್ ಕೊನೆ ಯೊಳು । ನಾನೆಂಬುವದೊಂದೇ ॥ ೧ ॥ ಅರುಹು ಮರವೆಗಳೊಳು । ಲೋಕದಕುಲ । ಗುರುಹಿರಿಕಿರಿಯರೊಳು ಪರರೊಳ್ವಾನರರೋಳ್ ಭೂವರ ರೋಳ್ । ಪಾಮರರೊಳು । ಸುರರೊಳ್ ಕಿನ್ನರರೊಳ್ ವಾಗ್ವರಹರಿಹರ ರೊಳು ನಾನೆಂಬುವದೊಂದೇ ॥ ೨ ॥ ತನುವಿದುನಾನೆಂಬಲ್ಲಿ ನಾನಲ್ಲೆಂದೀ । ತನುವ ಬೇರಿರಿಸುವಲ್ಲಿ । ತನುಸಾಕ್ಷಿಯಾರಲ್ಲಿ ತನುಕಾಣದಿರುವಲ್ಲಿ । ಚಿನು ಮಯ ಗುರುಶಂಕರನ ನಿಜಸ್ಥಿತಿಯೊಳು ॥ ನಾನೆಂಬುವದೊಂದೇ ॥ ೩ ॥

೧೫

ಸಟಪಟೇಹಿಂದು ಸಟಪಟೇಮುಂದು ಸಟಪಟೇಸಂದು ಸಟಪಟೇ । ಕುಟಿಲಮಾದಸನಾಗಿ ದಿಟವತಾನರಿಯದೆ ಪಿಟಿಪಿಟಿಯೆಂಬುದ ಸಟಪಟೇ ॥ ಸಟಪಟೆ ॥ ಪಲ್ಲವಿ ॥ ಮೂರುಮೂಲೆಯಕೂಟ ಸಟಪಟೆ । ಅಲ್ಲಿ । ಸೇರಿದ

ತಾರಕಸಟಪಟೆ। ಪಾರಮಾರ್ಥಿಕವಲ್ಲಿ ಬೇರೆಬೇರೆನಿಸುತ ತೋರಿಕೆಡುವುದೆಲ್ಲ ಸಟಪಟೆ॥ ಸಟಪಟೆ ॥೧॥ ವದನವೆಂಬುದು ಸಟಪಟೆ ಅಲ್ಲಿಹೊಂದಿದ ದೇವರು ಸಟಪಟೆ। ಹಿಂದುಮುಂದಿಲ್ಲವೆ ಸಂದಿನೊಳಗೆ ತೋರುವಂದಚಂದ ಗಳೆಲ್ಲ ಸಟಪಟೆ॥ ಸಟ ॥೨॥ ಧ್ಯಾನಮೌನಗಳೆಲ್ಲ ಸಟಪಟೆ। ನಿತ್ಯಸ್ನಾನ ಮಾನಗಳೆಲ್ಲ ಸಟಪಟೆ। ತಾನೊಬ್ಬನಿಲ್ಲಿನ್ನೇನು ಕಾಣಿಸದಾಗಿ ನಾನಾದೇವರು ಎಲ್ಲ ಸಟಪಟೆ॥ ಸಟ ॥೩॥ ಪರವಿಹವೆಂಬುದು ಸಟಪಟೆ। ತಾನು ತಿರುಗುವ ನೆಂಬುದು ಸಟಪಟೆ। ಗುರುಶಂಕರ ನಿಜವರಿಯದೆ ಪೇಳುವ ಪರಿಕಲ್ಪನೆಗಳೆಲ್ಲ ಸಟಪಟೆ। ಸಟಪಟೆ॥ ॥೪॥

೧೬

ಎಲ್ಲಾ ರೂಪವುತಾನಂತೆ ಎಲ್ಲೆಲ್ಲೂ ತುಂಬಿಹನಂತೆ ಅಲ್ಲಲ್ಲರಸುತ ಗುಡಿಗಳತಿರುಗುವಕಳ್ಳರಕಣ್ಣಿಗೆ ಕಲ್ಲಂತೆ ॥೧॥ ದೃಶವಿದಾದವತಾನಂತೆ ದೃಶ್ಯವನರಿವನುತಾನಂತೆ॥ ಎಲ್ಲಾ ರೂಪವು ತಾನಂತೆ ॥೨॥ ಕಳವಳಗಳು ತನಗಿಲ್ಲಂತೆ ಮೊಳಯುವದಿನ್ನೊಂದಿಲ್ಲಂತೆ। ಒಳಹೊರಗುದಿಸುವ ಕಲ್ಪಿತ ರೂಪವ ಬೆಳಗಿಸಿತಾ ಬೆಳಗುವನಂತೆ॥ ಎಲ್ಲಾರೂಪವುತಾನಂತೆ ॥೩॥ ಕುಂದೆಂಬುದುತನಗಿಲ್ಲಂತೆ ಮುಂದೊಂದಾದವತಾನಂತೆ॥ ಮುಂದೊಂದಾವಂದ ರೊಳೊಡಗೂಡುವ ಸಂದಿನೊಳಗು ಸೇರಿಹನಂತೆ॥ ಎಲ್ಲಾರೂಪವುತಾನಂತೆ ॥೪॥ ಕಣ್ಣೆಂಬುದ ತನಗಿಲ್ಲಂತೆ ಕಣ್ಣಿಗೆಕಣ್ಣಾಗಿಹನಂತೆ॥ ಕಣ್ಣ ತೆರೆದು ತನ್ನರ ಸುವರಿಗೆ ತಾಬಣ್ಣಬಣ್ಣವಾಗಿಹನಂತೆ॥ ಎಲ್ಲಾರೂಪವುತಾನಂತೆ ॥೫॥ ಕಳೆದುಳಿಯುವುದೇ ತಾನಂತೆ॥ ಉಳಿವನ ಕಳಿಯುವರಿಲ್ಲಂತೆ॥ ಕುಲಶೀಲ ಗಳೆಂಬ ಕೊಳೆಯಿಲ್ಲದೆ ನಿರ್ಮಲದೊಳಗಿರುವನು ತಾನಂತೆ॥ ಎಲ್ಲಾರೂಪವು ತಾನಂತೆ ॥೬॥ ಕಿಂಕರನಾದವ ತಾನಂತೆ। ಶಂಕರನಾದವ ತಾನಂತೆ। ಮಂಕನು ಬಿಡಿಸುತ ಕಿಂಕರರಿಗೆ ಗುರುಶಂಕರ ನಾದವ ತಾನಂತೆ॥ ಎಲ್ಲಾರೂಪವು ತಾನಂತೆ ॥೭॥

೧೭

ರಾಗ—ಯಾಲಪದ ಶ್ರೀಗಿರಿಸುಕ್ಷೇತ್ರಕ್ಕೆ ಎಂಬಂತೆ.

ಐದುಸುತ್ತಿನಕೋಟೆಯು ಪುರಕನಾದಿಯಿಂ ತಾನರಸನಾಗಿ ಬಾಧೆಯಿಲ್ಲದೆ ಒಬ್ಬನೆನೆಲಸಿರುವ ಓ ಗುರುಶಂಕರಾರ್ಯನಾದ ವಡಗಿದ ಜನರಿಗೆ ಕಾಣಿಸುವ

॥ ೧ ॥ ಒಂದೊಂದು ಕೋಟೆಯು ಬಾಗಿಲಿನೊಳ್ ಹೊಂದಿ ತಾನೇ ತನ್ಮಯ ನಾಗಿ ಹಿಂದುಮುಂದೂ ನೋಡದೆ ಕಾದಿರುವ ಓ ಗುರುಶಂಕರಾರ್ಯ ಮುಂದೆ ಯಿರುವದ ತನ್ನಂತೆ ಭಾವಿಸುವ ॥ ೨ ॥ ಕುಳಿತ ಊಳಿಗದೈವರನು ಚಲಿಸುವ ಜಾರರೈವರನು ಬಲದ ಭಟರೈವರ ತಾ ಕೂಡಿರುವ ಓ ಗುರುಶಂಕರಾರ್ಯ ಕುಲವತೋರಿಸಿದ ತಾಯಿಗೆ ತಗ್ಗಿರುವ ॥ ೩ ॥ ತನ್ನ ಸತಿಯೋಳ್ಕೂಡಿಕೊಂಡು ಮುನ್ನಿರ್ದವಳಪ್ಪಿಕೊಂಡು ಕಣ್ಣನೂರಿನಮೇಲೆ ಗತಿಗೊಂಡು ಓ ಗುರು ಶಂಕರಾರ್ಯ ಭಿನ್ನಿಭಿನ್ನಿಸಿಕೊಂಡು ತಿರುಗುವನು ॥ ೪ ॥ ಬಣ್ಣವ । ಮೈಗೆ ಬೊಳಕೆಗಿಂಡಿರುವ ತನ್ನ ತಿಳಿಯದೆ ಕಳೆಗುಂದಿರುವ ಹೆಣ್ಣು ಹೊನ್ನಿನವೇಶವ ಧರಿಸಿರುವ ಓ ಗುರುಶಂಕರಾರ್ಯ ನಿನ್ನ ಕೂಡಿದೊಡೆವನೀಗ ನಿಜದೇವ ॥೫॥ ದೇಶದೇಶವನೆಲ್ಲ ಸುತ್ತಿ ನಾಶಾತೀತನ ನಾನೋಡಿ ಬಂದೆ ನಾಶರಹಿತನು ಶರೀರದೊಳಗುಂಟು ಓ ಗುರುಶಂಕರಾರ್ಯ ಕೋಶಕಳದವಗೀಮರ್ಮ ಗೊತ್ತುಂಟು ॥ ೬ ॥

೧೮

ಹೇಳಿಬಾರೆಜಾಣೆ ಸದ್ಗುರುವಿನ ಕೀಲೆ ಬೇಕೆಕಾಣೆ । ಕಾಲಕರ್ಮಗಳಿಲ್ಲ ದಾಲಯದೊಳಗಿರ್ದ । ಮೇಲುಮಂಚದಮೇಲೆ ಲೀಲೆಯೊಳಿಹಳೆಂದು । ಹೇಳಿಬಾರೆಜಾಣೆ ॥ ೧ ॥ ಹಿಂದಿದ್ದವನು ಕೆಟ್ಟ ಮುಂದಿರುವನು ಬಿಟ್ಟ । ಬಂದಾವಗೆಡೆಗೊಟ್ಟಾನಂದದೊಳಿಹಳೆಂದು ॥ ಹೇಳಿಬಾರೆಜಾಣೆ ॥ ಅವರಿವ ರೊಡಗೂಡಿ ಅವರವರಂತಾಡಿ । ಅವರವಿವರಮಾಡಿ ಸವಿನೋಡುತ್ತಿಹಳೆಂದು ಹೇಳಿಬಾರೆಜಾಣೆ ॥ ೩ ॥ ನೆರೆಹೊರೆಗಳು ಹೋಗಿ ಪುರಕೆತಾನರಸಾಗಿ । ಗುರು ಶಂಕರನಿಗಾಗಿ ಶಿರವನೀಗಿಹಳೆಂದು ॥ ಹೇಳಿಬಾರೆಜಾಣೆ ॥ ೪ ॥

೧೯

ಕೇಳಿ ತೊರದ ಜ್ಞಾನವ ಪೇಳುವೆನು ಮೂಲಧರ್ಮಜ್ಞಾನವ । ಕೇಳಿ ದಂದದೊಳಿರ್ದವ ಜಗದೊಳಗೆ ಫಾಲಲೋಚನನಾಗುವ ॥ ಪಲ್ಲವಿ ॥ ಸತಿ ಯೆಂಬ ಮೋಹಪೋಗಿ ಯೆನಗಿವನು ಪತಿಯೆಂಬ ಮಮತೆ ನೀಗಿ । ಸತಿಪತಿ ಗಳೊಂದೆಯಾಗಿ ಸುಖಿಸಲವಚತುರಸನಿಸ್ಸಂಗಯೋಗಿ॥ ಕೇಳಿ ತೊರದ ಜ್ಞಾನವ

॥ ೧ ॥ ಮನವುಪರಿಶುದ್ಧವಾಗಿ ಸಂಪದವು ಕನಸಿನಾಕಾರವಾಗಿ। ಕನಕ ಕಸ ದಂತೆಯಾಗಿ ಬಾಳಿದೊಡೆ ಮನುಜನವರಾಜಯೋಗಿ। ಕೇಳಿತೋರದಜ್ಞಾನವ ॥ ೨ ॥ ಚರ್ಮದಾಹಾರಕಾಗಿ ಪ್ರಾರಬ್ಧಕರ್ಮವಿದ್ದಂತೆಯಾಗಿ। ನಿರ್ಮಮತೆ ಮುಂದೆಸಾಗಿ ನಿಂತವನು ಮರ್ಮವಿಜ್ಞಾನಯೋಗಿ॥ ಕೇಳಿತೋರ ॥ ೩ ॥ ಪತಿಹಿತವುಭಿನ್ನವಾಗಿ ಅದರಿಂದ ಸತಿಗೆ ಬೇಸರಿಕೆಯಾಗಿ।:ಸತಿಪತಿಗಳಿಬ್ಬರಾಗಿ ಕೂಡಿದವಕ್ಷಿತಿಯೊಳಗೆ ಜನ್ಮರೋಗಿ। ಕೇಳಿತೋರ ॥ ೪ ॥ ಮರವೆ ಮುಂದಿಲ್ಲ ವಾಗಿ ಜಗವೆಲ್ಲ ಪರಿಪೂರ್ಣಭಾವವಾಗಿ ಅರುಹಿನೊಳು ನಿಂತಯೋಗಿ ಮೆರೆಯು ವನು ಗುರುಶಂಕರಾರ್ಯನಾಗಿ। ಕೇಳಿತೋರದ ಜ್ಞಾನವ ॥ ೫ ॥

೨೦

ಇವನ್ಯಾರೊ ನೋಡು ಬಾರಮ್ಮ ಕಣ್ಣು ಕಿವಿಕಾಲು ಮೂಗು ಯೇನೊಂದಿಲ್ಲವಮ್ಮ ॥ ಇವನಾರೊ ॥ ಪಲ್ಲವಿ ॥

ಕೋಣೆಮನೆಯೊಳು ಕೂತಿರುವ ನೋಡುಕಾಣುವನವನ ಕಟ್ಟುಮ ನ್ಯಾವನಿರುವ। ಮಾನಮೇಯುಗಳ ಬಿಟ್ಟಿರುವಬಾರೆ ನಾನು ನೀನೊಂದೆ ಯೆಂದೆನ್ನ ಕರೆಯುವ ಇವನ್ಯಾರೋ ॥ ೧ ॥ ತಂದೆತಾಯಿಗಳಿಲ್ಲದವನು ತಾನು ಹಿಂದುಮುಂದಿರ್ದುದರಿಯದೆ ಬಂದಿಹನು। ಮುಂದು ಹಿಂದಿಲ್ಲವಾಗಿಹನು ತಾನೆ ಮುಂದಾಗಿ ಹಿಂದುಳಿಯದೆ ಮಿಡುಕುವನು। ಇವನ್ಯಾರೊ ॥ ೨ ॥ ಶರೀರವಿಲ್ಲದೆ ಕಾಣಿಸುವನು ತನ್ನ ಪರಕಿಸುವರನು ತನ್ನಂತೆ ಮಾಡುವನು ಚರಣ ವಿಲ್ಲದೆ ಚರಿಸುವನು ನಿಮ್ಮ ಗುರುಶಂಕರಾರ್ಯನಾನೆಂದು ಪೇಳುವನು ಇವನ್ಯಾರೊ ನೋಡುಬಾರಮ್ಮ ॥ ೩ ॥

೨೧

ಜೀವನೀಸರ್ವಾಧಾರನು ಕೇಳಿ ಸಂಸಾರಭಾವನಿನ್ನೊಳಗಿಲ್ಲಜೀವ। ಭಾವ ಭೇದಗಳಿಂದ ತೋರುವ ಜಗವನು ಭಾವಿಸುಪುಸಿಯೆಂದೆ ಜೀವ ॥ ಪ ॥

ತಾತಜಾಮಾತಮಾತುಳ ಸುಹಿತರೆಂಬ ಮಾತಿನೊಳಗುನೀನೆಜೀವ। ಜಾತಿಯೊಳುದಿಸಿ ಜಾತಿಯಕೆಡಿಸುವ ಹೊಸ ಸೂತಕದೊಳು ನೀನೆಜೀವ। ರೀತಿ ತೋರದ ಬರಿಮಾತಿಸ ಬಗೆಬಗೆಜಾತಿಯೊಳಗು ನೀನೆಜೀವ ಸೂತಕವಳಿದೀಗ

ಪ್ರೂತನಾದನುಂಟೆಂಬ ನೀತಿಯೊಳಗು ನೀನೆ ಜೀವ। ಜೀವನೀಸರ್ವಾ ॥ ೧ ॥ ಬಾಲತ್ವದೊಳು ಸತಿಲೀಲಾವಸ್ಥೆಯೊಳಂತರಾಳದೊಳಗು ನೀನೆ ಜೀವಕೀಳೆಂಬ ಬಳಿಕೀಗ ಮೇಲೆಂಬ ವ್ಯವಹಾರಕಾಲದೊಳಗುನೀನೆಜೀವಾ ಬಾಳುವಬಾಳಿದ ಬಾಳುತಿರುವೆಯೆಲ್ಲಾ ಬಾಳುಗಳೊಳು ನೀನೆಜೀವ। ಕಾಲಕರ್ಮಗಳಿಂದ ಕೀಳುಮೇಲಾದ ಲೋಕಾಳಿಯೊಳಗು ನೀನೆಜೀವ ॥ ಜೀವನೀ ॥ ೨ ॥ ನೆನಪಿನೊಳಗು ಮೇಣಾಕನಸಿನದರಮೇಲಿನ ಸುಷ್ಟುಯೊಳು ನೀನೆ ಜೀವ। ತನಿನಿದ್ರೆಯುಡಗಿದುಸ್ಮ ಸಿಯೆಂಬ ತುತ್ಯಾತೀತನ ಭಾವದೊಳು ನೀನೆ ಜೀವ। ತನುಕರ್ಮಫಲತೀರ ಜನಿಸುವ ಮುಂದಿನ ತನುವಿನೊಳಗು ನೀನೆ ಜೀವ। ಜೀವನೀನಾನಂದ ॥ ೩ ॥ ವನಿತಾಲಿವಿಷಯರೂಪವನಾಂತುಚರಿಸುವಮನಸಿನೊಳಗು ನೀನೆ ಜೀವ। ಜನಿಸಿಮಾನಸಪೂಜೆಯೊಳು ತೋರ್ಪದೇವರ ಗಣನೆಯೊಳಗು ನೀನೆ ಜೀವ। ಮನಸಿನ ವಿಷಯವೃತ್ತಿಗಳೆಲ್ಲ ಮುಳುಗಿದ ಘನಮೌನದೊಳು ನೀನೆ ಜೀವ। ಘನವಲ್ಲದುದನೆಲ್ಲ ಘನವಾಗಿ ಮಾಡುವ ಘನಮಹಿಮನು ನೀನೆ ಜೀವಜೀವ ॥ ೪ ॥ ಅರಹುಮರವೆಗಳ ಕುರುಹಿಟ್ಟುಬೆಳಗಿಸುವರುಹಿನೊಳಗು ನೀನೆ ಜೀವ। ನರನಾಗ ಶುನಕಸೂಕರಖರಗಕೀಟವಾನರದೇಹದೊಳು ನೀನೆ ಜೀವ। ಸುರಸಿದ್ಧ ಗರುಡಕಿನ್ನರವಿಧಿಹರಿಪುರಹರ ನಾಮದೊಳು ನೀನೆಜೀವ। ಪರವೆಂಬುದಡಗಿ ನಿಂತಿರುವ ಶ್ರೀಗುರುಶಂಕರಪದದೊಳು ನೀನೆಜೀವಜೀವ ಜೀವನೀಸರ್ವಾಧಾರನು ॥ ೫ ॥

## ೨೨

### ಒಂದೇನಾಮದೊಳಡಗಿಹುದು ಎಂಬಂತೆ

ರೂಪುನಾಮಂಗಳ ಕಳಿಯೋ ನೀನಲ್ಲುಳಿಯೋ। ಜನ್ಮ। ತಾಪವಿಲ್ಲದ ನಿತ್ಯಾನಂದದೋಳ್ ಸುಳಿಯೋ ॥ ರೂಪು ॥ ಪಲ್ಲವಿ ॥

ಪಾಪನಾಶಿನಿಯೊಳುಕೂಡಿ ಸ್ನಾನಮಾಡಿ। ಪುಣ್ಯಪಾಪಮಲವನೆಲ್ಲ ನಿರ್ಮೂಲಮಾಡಿ ॥ ರೂಪು ॥ ೧ ॥ ಇದು ಇಲ್ಲದೆ ಪರಿಯಾಗಿ ಸದ್ದುಪೋಗಿ। ಮುಂದೆ। ಉದ್ಧರಿಸೆಂಬವಾಸನೆಯೆಲ್ಲ ನೀಗಿ। ರೂಪು ॥ ೨ ॥ ಹಿಂದುಮುಂದಿನ ಕೀಲಬಿಡಿಸ ಮಲವಗುಡಿಸಿ। ಮುಂದೆ। ನಿಂದಿರುವವರೊಳಾನಂದವ ಬೆರಸಿ। ರೂಪು ॥ ೩ ॥ ಮರಣಜನ್ಮಂಗಳುಪೋಗಿ ಒಂದೆಯಾಗಿ। ನಮ್ಮ। ಗುರುಶಂಕರಾರ್ಯನೊಳ್ ಬೆರದೇಕನಾಗಿ। ರೂಪು ॥ ೪ ॥

## ೨೩

### ಓ ರಾಮನೀನಾಮಮೇಮಿರುಚಿರಾ ಎಂಬಂತೆ

ತಾನೆಂಬುದೊಂದುಂಟದೇನು ಸವಿಯಮ್ಮ ॥ ಪಲ್ಲವಿ ॥ ಆನಂದನಿಧಿಯದನು ಕಾಣರಲ್ಲಮ್ಮ ॥ ಅನು ॥ ಕಾಣುವಂಗದಿ ಕೂಡಿ ನಾನಾರೂಪಿನೊಳಾಡಿ ನಾನಾತ್ವವಿಲ್ಲದಿರಲು ಕಾಣುವುದಮ್ಮ ॥ ತಾನೆಂಬು ॥ ೧ ॥ ಪ್ರಾಣಾಂಗದೊಳು ಸೇರಿ ನಾನಾರಸನಪೀರಿ । ಪ್ರಾಣವಬೇರಿಟ್ಟರದು ಕಾಣುವುದಮ್ಮ । ತಾನೆಂಬು ॥ ೨ ॥ ಮಾರುತಸುತನೊಳು ಸೇರಿ ಸಂಕಲ್ಪವ ಮೀರಿದ ಧೀರರಿಗದು ತೋರುವುದಮ್ಮ ॥ ತಾನೆಂಬು ॥ ೩ ॥ ವಿಜ್ಞಾನಾಜ್ಞಾನಂಗಳ ಯಜ್ಞವ ಮಾಡಿನಿಂತ । ಪ್ರಾಜ್ಞರಂತದೊಳಿರುವ ಸಂಜ್ಞೆ ಕಾಣಮ್ಮ ॥ ತಾನೆಂಬು ॥ ಗುರುಶಂಕರಾರ್ಯನ ಶರಣುಯೆಂಬಾತನ ಪರಿಪೂರ್ಣ ಭಾವದೊಳು ಮೆರೆಯುತ್ತಲ್ಲಮ್ಮ ॥ ತಾನೆಂಬುದೊಂದುಂಟದೇನು ॥ ೫ ॥

## ೨೪

### ಪಾಥೆಯಕಟ್ಟಿರೋ ವೈಕುಂಠಕ್ಕೆ ಎಂಬಂತೆ

ಪೋಗಿಬಾಳುವ ಬನ್ನಿರೊ ನಮ್ಮೂರೊಳು ರೋಗವಿಲ್ಲವು ಕಾಣಿರೋ ॥ ಪಲ್ಲವಿ ॥

ತ್ಯಾಗವಿಯೋಗಾನುರಾಗಭೋಗಗಳೆಂಬ ಸಾಗರವನು ದಾಟಿ ಯೋಗಿಗಳೊಂದಾಗಿ ಪೋಗಿಬಾಳುವ ॥ ಅನುಬರವೆಂಬ ಭಯವಲ್ಲಿಲ್ಲ । ಕಳ್ಳರಕಾಟ । ಸೆರೆಮನೆದೊರೆಮನೆಗಳಿಲ್ಲ ಕೊರತೆಯಾಗಲುಬೇರೆ ಸಿರಿವಂತರಿಲ್ಲಿಲ್ಲ ॥ ಮರಣಜನ್ಮಗಳ ಪೊತ್ತಿರುವ ಭವಿಗಳಿಲ್ಲ ॥ ಪೋಗಿ ॥ ೧ ॥ ನೆರೆಹೊರೆಯೆಂಬುದಿಲ್ಲ ಕಿಂಕರಭಾವ । ವರಸಿ ನೋಡಿದೊಡಲಿಲ್ಲ ॥ ಬರುವಸಂಕಟವಿಲ್ಲ ಮರಳು ಮಾಡುವರಿಲ್ಲ । ನರಕನಾಕಗಳೆಂಬಪರಿಕಲ್ಪನೆಗಳಿಲ್ಲ ॥ ಪೋಗಿ ಬಾಳುವ ॥ ೨ ॥ ಛಳಿಗಾಳಿಮಳೆಗಳಿಲ್ಲ । ಸೂತಕದಿಂದ ಬಳಲುವ ಕೊಳೆಗಳಿಲ್ಲ । ಕುಲಜಾತಿಗಳೆಯುವ ಬಳಗದ ಸುಳುಹಿಲ್ಲ । ನೆಲಸಿಹರಲ್ಲಿ ಸತ್ಕುಲದ ಸಜ್ಜನರೆಲ್ಲ । ಪೋಗಿಬಾಳುವ ಬನ್ನಿರೋ ॥ ೩ ॥ ಬರುವ ತಾಪಂಗಳಿಲ್ಲ ನೋಡಲು ನಿತ್ಯ । ಪರಿಪೂರ್ಣಾನಂದವೆಲ್ಲ ನರಕುರಿಗಳೊಳಿದ ನರಿತವರ್ಯಾರಿಲ್ಲ । ಧರೆಯೊಳಿದನು ನಮ್ಮ ಗುರು ಶಂಕರನೆಬಲ್ಲ ॥ ಪೋಗಿ ॥ ೪ ॥

೨೫

ತನ್ನೊಳಿಹುದು ತತ್ವವೆಲ್ಲ। ಇದ। ತನ್ನರಿತಯೋಗಿಬಲ್ಲ ॥ ಪಲ್ಲವಿ ॥

ತನ್ನ ಮೂಲವ ಕಂಡವನನ್ಯಭಾವವು ತೋರೆ। ಜನ್ಮಮರಣಗಳ ಭಯ ವೆಂಬುದಿನಿಲ್ಲ। ತನ್ನೊಳಿಹುದು ॥ ಅನುಪಲ್ಲವಿ ॥

ಅನ್ನಮಯಾಂಗ ತಾನಲ್ಲ। ಪ್ರಾಣ। ತನ್ಮನೋಧಿ ಬೀಜನಲ್ಲ। ಭಿನ್ನವಕಳೆದೆಲ್ಲ ಸನ್ಮಯವಾಗಲು ಉನ್ಮನಿಪದಪೊಂಗಿ ಚಿನ್ಮಯನಹುದೆಲ್ಲ ॥ ತನ್ನೊಳಿಹುದು ॥ ೧ ॥ ಗಣಿಸೆ ದೇವರು ಬೇರಿಲ್ಲಿಲ್ಲ। ತನ್ನ। ಮನದೊಳು ನೆಲಸಿಹರೆಲ್ಲ। ಮನದೊಳು ನೆಲಸಿಪರೆಲ್ಲ। ಮನದೊಳು ಬೆಳಗುವ ಚಿನು ಮಯನರಿಯದೆ। ಕನಸಿನ ಕಥೆಗಳ ಗುಣಿಸಿಕೆಟ್ಟರು ಎಲ್ಲ ॥ ತನ್ನೊಳಿಹುದು ॥ ೨ ॥ ಮನವು ಸೇರದೆ ಬೇರೊಂದಿಲ್ಲ। ನೋಡುಮನವೆ ಈ ಜಗವಾಯಿ ತಲ್ಲ। ಮನದ ಬಯಕೆಯಂತೆ ತೋರುವ ಜಗವೆಲ್ಲ। ಮನದೊಳಡಗೆ ಮನ ಕಾಧಾರಬೇರಿಲ್ಲ। ತನ್ನೊಳಿಹುದು ॥ ೩ ॥ ವಡವೆಕಾಲದಿ ಚಿನ್ನವಿಲ್ಲ। ನೋಡ। ಲೊಡವೆಗಳವೆನು ಬಿಟ್ಟಿಲ್ಲ। ವಡಲನಮಡಿಯೊಳು ಮೃಡನು ಕಾಣಿಸಲಿಲ್ಲ। ಮೃಡನಬಿಟ್ಟರೆ ಬೇರೆ ಜಡಪೊಡಲಿರದಲ್ಲ ॥ ತನ್ನೊಳಿಹುದು ॥ ೪ ॥ ಮರವೆಯೆಂಬುದು ಬೇರೆಯಿಲ್ಲ। ಅದ। ನರಿತವನಿಗೆ ಜನ್ಮವಿಲ್ಲ ಅರುಹು ಮರವೆಗಳೊಂದರೊಳು ಮತ್ತೊಂದಿಲ್ಲ ಅರುಹಿನ ಕುರುಹನು ಗುರುಶಂಕರನೆಬಲ್ಲ ॥ ತನ್ನೊಳಿಹುದೆಲ್ಲ ತತ್ವವಿಲ್ಲ ॥ ೫ ॥

೨೬

ತಾನೆನ್ನಬಹುದೇ। ಈ ದೇಹವ। ತಾನೆನ್ನಬಹುದೇ ॥ ಪಲ್ಲವಿ ॥

ಜ್ಞಾನಮೂರುತಿ ತಾನು ಕಾಣುತೆಲ್ಲವನಿಲ್ಲಿ। ಪ್ರಾಣಹಾರಿದಮೇಲೆ ಹೂಣುವ ಹೆಣವಿದ ॥ ತಾನೆನ್ನ ॥ ಅನು ॥

ನಿತ್ಯನಲ್ಲೆಂದ। ಸುಪ್ತಿಯೊಳಿದ್ದ। ಸತ್ವವಕೊಂದೇ। ಮೃತ್ತಿಕೆಯನು ತಂದೆ ಭೃತ್ಯನಾನದಕೆಂದೆ। ಸತ್ತುಹುಟ್ಟುತಬಂದೆ ಪೃಥ್ವಿಯೊಳಗೆಬೆಂದೆ ॥ ನಾನೆನ್ನ ॥ ೧ ॥ ಯಾರುನೀಪೇಳೈ। ದೇಹವಬಿಟ್ಟು। ಬೇರೆನೀನೇಳೈ। ತೋರುವೀತನುವಿಗೆ ಬೇರೆ ನೀನಾದೊಡೆ। ಹಾರುತೀ ಜಗವೆಲ್ಲ ತೋರಲಿನ್ನೇ ನಿಲ್ಲ। ನಾನೆನ್ನಬಹುದೇ ॥ ೨ ॥ ಪೊರೆಯೊ ಶ್ರೀಹರಿಯೇ ಎಂಬುವದೊಂದೆ

ಹರಿಯನೀನರಿಯೇ । ಹರಿಯಿರುವಂದನರಿಯಲು ನೀ ನಮ್ಮ । ಗುರು ಶಂಕರಾರ್ಯನೋಳ್ ಬೆರೆಯೋನರಕುರಿಯೇ ನಾನೆನ್ನಬಹುದೇ ಈ ದೇಹವ ॥ ೩ ॥

೨೭

ನೋಡುನೋಡು ನಿನ್ನೊಳಿರುವಕೇಡುತೋರದಾನಂದವ । ಕೂಡು ಪಾದಾಂಬೋಜವ ಮೂಢನಾಗಿ ಕೆಡದಿರುವ ಜೀವ ॥ ನೋ ॥ ಪಲ್ಲವಿ ॥

ನಾಡಿನವರೋಳ್ ಕೂಡಬೇಡ। ಓಡುವವರಂತೋಡಬೇಡ। ನೋಡುವ ಭಾಗ್ಯವನೇಪಡೆದು । ಕೂಡಿಕೂಡದವನಾಗೋಜೀವ ॥ ನೋಡು ॥ ೧ ॥ ನಾಕಸುಖದೋಳ್ ಕೂಡಬೇಡ। ಲೋಕದವರಂತಾಡಬೇಡ ಬೇಕುಬೇಡೆಂಬುದ ನೀ ಕಳೆದು ಏಕಮೇವಾದ್ವಯಮಾಗೋಜೀವ ॥ ನೋಡುನೋಡು ॥ ಮೋಹಿಯಾಗಿ ತಿರುಗಬೇಡ ದೇಹವೇ ನಾನೆನ್ನಬೇಡ । ದೇಹನಾನಾಸ್ತಿಯ ನೀತಿಳಿದು ದೇಹವಿಲ್ಲದವನಾಗೊ ಜೀವ । ನೋಡು ನೋಡು ॥ ೩ ॥ ಮುಂದೆಪೋಗಿಕೂಗಬೇಡ । ಹಿಂದಿನಂಶಮುಳಿಸಬೇಡ । ಹಿಂದೆಮುಂದೆಂಬುವ ಬಂಧಗಳಹೊಂದುವರಿಗಾಶ್ರಯನಾಗೊ ಜೀವ ॥ ನೋಡು ॥ ೪ ॥ ಧರೆಯ ತಿರುಗಿಬಳಲಬೇಡ । ಬರಿದೆನೇಮವಮಾಡಬೇಡ । ಪರಮಗುರುಶಂಕರನೋಳ್ ಬೆರೆದು ಮರಣ ಜನ್ಮಂಗಳ ನೀಗೊಜೀವ । ನೋಡುನೋಡು ನಿನ್ನೊಳಿರುವ ॥ ೫ ॥

೨೮

ಗುರುಸೇವೆಕೊನೆಸಾಗಲಿಲ್ಲ । ಈ । ಮರಣಭೀತಿಯು ಪೋಗಲಿಲ್ಲ । ಕರಣವಬೇರಿಟ್ಟು ಭರಣವದರೊಳಿಟ್ಟು । ಸಿರಿತನವನು ಸುಟ್ಟು ಜರಿಸುವ ರಾರಿಲ್ಲ ॥ ಗುರು ॥ ಪ ॥

ಕೇಳಿದರ್ಥವು ನಿಲ್ಲಲಿಲ್ಲಮುಂದೆ । ಕೇಳಲೇನದುಫಲವಿಲ್ಲ । ಕಾಲು ಗಳುದಿಸಿಲ್ಲ ಗಮನವೆಂತವಬಲ್ಲ । ಕೀಳುಮೇಲರಿಯದೆಪಾಳಾಯ್ತು ಜಗ ವೆಲ್ಲ ॥ ಗುರುಸೇವೆ ಕೊನೆಸಾಗಲಿಲ್ಲ ॥ ೧ ॥ ರಾಗಾದಿಗಳು ಪೋಗಲಿಲ್ಲ । ಸುಖವಾಗಲೆಂದೊಡೆ ಸಾಗೊದಲ್ಲ । ರೋಗಪೋಗದರಸ ಸೇವಿಸಿ ಫಲವಿಲ್ಲ । ಯೋಗನಿಲ್ಲದೆ ಶಿರಬಾಗಿದೊಡೇನಿಲ್ಲ । ಗುರುಸೇವೆ ॥ ೨ ॥ ಹರುಷತನ್ನೊಳ

ಗೇರಲಿಲ್ಲ । ಸಾಧುಚರಣ ಕೈವಶವಾಗಲಿಲ್ಲ । ನರಭಾವ ಕೆಡಲಿಲ್ಲ । ಕೊರತೆಗೆ ಕಡೆಯಿಲ್ಲ । ಗುರುಶಂಕರನೊಳು ತನ್ನರಕತೋರಿಸಲಿಲ್ಲ । ಗುರುಸೇವೆ ಕೊನೆಸಾಗಲಿಲ್ಲ ॥ ೩ ॥

೨೯

ಬೇವುಬೆಲ್ಲದೊಳಿಡಲೇನು ಫಲ ಎಂಬಂತೆ

ನಿಂದಿಸುವರು ನಮ್ಮ ಬಂಧುಕುಲ । ನರ । ಹಂದಿಗಳೊಡನೆ ನಮಗೇನುಫಲ । ಸಂದುಗೊಂದಿಲ್ಲದಾನಂದರಸವೆತುಂಬಿ ಬಂಧುರವಾಗಿದೆ ನಮ್ಮ ಬಲ । ಬಂದಿರುವೀಭವಬಂಧನವಳಿಯದವಂದನೆಯಿಂದೆಮಗೇನು ಫಲ । ನಿಂದಿಸುವರು ನಮ್ಮ ॥ ಪಲ್ಲವಿ ॥

ಎಲ್ಲೆಲ್ಲಿಯುಯೆಡೆಯಿಲ್ಲದ ಮೂರ್ತಿಗೆ ಕಲ್ಲಿನಮನೆಯಿಂದೇನು ಫಲ । ಸಲ್ಲಲಿತಾನಂದೊಲ್ಲಸಿತಾತ್ಮಗೆ ಬೆಲ್ಲವತೋರಿದೊಡೇನು ಫಲ । ನಿಂದಿಸುವರು ನಮ್ಮ ॥ ೧ ॥ ಮಾರಜನಕನಾಕಾರವ ಕಾಣದೆ ಆರತಿಬೆಳಗಿದೊಡೇನು ಫಲ । ಮೂರುಗುಣಂಗಳ ಮೀರಿದಪದದೊಳು ಸೇರದ ಸುಖದಿಂದೇನು ಫಲ । ನಿಂದಿಸುವರು ನಮ್ಮ ॥ ೨ ॥ ಪರಮಪುರುಷ ತನ್ನಕರುಣಿಸಿನೆಲಸಿರೆ ಧರೆಯನು ತಿರುಗಿದೊಡೇನು ಫಲ । ಮರಣವುಬಂದಿಹ ಪರಿಯನು ತಿಳಿಯದೆ ಶರಣನುಯೆಂದೊಡದೇನು ಫಲ । ನಿಂದಿಸುವರು ನಮ್ಮ ॥ ೩ ॥ ದೇವರು ಬೆಳಗುವ ಭಾವವತಿಳಿಯದೆ ಭಾವಿಗೆತಿರುಗಿದೊಡೇನುಫಲ । ಜೀವನುಯೆಂಬುವ ಭಾವವುಪೋಗದೆ ಕೋವಿದನಾದೊಡದೇನು ಫಲ । ನಿಂದಿಸುವರು ನಮ್ಮ ಬಂಧು ॥ ಹೊರವಳಗೆಂಬುದ ಧರಿಸಿದ ಮಾಯೆಯನರಿಯದ ಮತಿಯಿಂದೇನು ಫಲ । ವರಗುರುಶಂಕರನಡಿಯೊಳು ಬೆರೆಯದ ನರದೇಹವು ಇದ್ದೇನುಫಲ । ನಿಂದಿಸುವರು ನಮ್ಮ ಬಂಧು ॥ ೫ ॥

೩೦

ವಂದಿಸ್ಯೆ ಗುರುಶಂಕರಾರ್ಯನ ವಂದಿಸನುಪಮಕಾರ್ಯನ । ವಂದಿಸಜ್ಞಾನಂಧತಮ ನಿರ್ಬಂಧವಾರಣ ಸೂರ್ಯನ ॥ ಪಲ್ಲವಿ ॥

ನಿಂದನೆಯ ಮಾಡಿದೊಡೆ ಯಮಭಟರಿಂದ ಬಂಧಿತನಾಗುವೆ ॥

ವಂದನೆಯುಮಾಡಿದೊಡೆ ನೀನಾವಂದ್ಯನಿಗೆ ಭಟನಾಗುವೆ ॥ ನಿಂದುಯೋಗವ ಸಾಧಿಸಿದೊಡದರಿಂದ ದೇಹವ ಬೆಳಸುವೆ ॥ ತಂದೆ ಗುರುಶಂಕರನ ಭಜಿಸಾ ನಂದಮಯನಾಗುಳಿಯುವೆ । ವಂದಿಸೈಗುರುಶಂಕರಾರ್ಯನ ॥ ೧ ॥ ತಿರುಗೆ ತೀರ್ಥಕ್ಷೇತ್ರಗಳ ನೆರೆಹೊರಗೆ ಸರಿಯೆನೆ ಬಾಳುವೆ । ಧರಣಿದಾನವಮಾಡೆ ನೀನಾಧರಣಿಯನುಮುಂದಾಳುದ । ವರಸಿಯಜ್ಞದಿಕೂಡೆ ನಾಕವತಿರಗಿ ಧರಣಿಗೆ ಬೀಳುವೆ । ಸ್ಮರಿಸಿಗುರುಶಂಕರನ ಯೆಡೆಬಿಡದಿರುವ ಮೃತ್ಯುವ ಸೀಳುವೆ ॥ ವಂದಿಸೈಗುರುಶಂಕರಾರ್ಯನ ॥ ೨ ॥ ಹೆಮ್ಮೆಯಲಿ ಮೆರೆದಾಡಿ ದೊಡೆ ಕಾಡೆಮ್ಮೆಯೇ ಮುಂದಾಗುವೆ ಸುಮ್ಮನಿರ್ದೊಡೆ ಕಲ್ಲುಮರಗಳ ತಮ್ಮನಾಗುತ ಬೆಳೆಯುವೆ । ಸಮ್ಮತಿಸಿ ಕರ್ಮಗಳದರಿಂ ನೆಮ್ಮದಿಯನೀಗಾ ಡುವೇ ನಮ್ಮ ಗುರುಶಂಕರನ ಪಿಡಿ ಪರಬೊಮ್ಮವೆ ನೀನಾಗುವೆ । ವಂದಿಸೈ ಗುರುಶಂಕರಾರ್ಯನ ವಂದಿಸನುಪಮ ॥ ೩ ॥

೩೧

ನಿನ್ನೊಳ್‌ನೋಡದೆ ನಿನ್ನ ಬಣ್ಣ ಬಾಡಿತು ಜೀವ । ಮಣ್ಣನಂಗಿಯ ಬಿಚ್ಚು ನೀನೆ ನಿಜದೇವ ॥ ಪಲ್ಲವಿ ॥

ತನವೆಂಬುದು ನೀನಲ್ಲ ತನುಧರ್ಮವು ನಿನದಲ್ಲ ತನುಮಣ್ಣಾ । ದರು ನೀನು ಮಣ್ಣಾಗುವನಲ್ಲ ॥ ನಿನ್ನೊಳ್ ॥ ೧ ॥ ಹನನವಾಯಿತು ಹಿಂದೆ ಜನನವಾಯಿತು ಮುಂದೆ । ತನುಧರ್ಮವಿದುನಿಂದೆಮನನಿಸಿದತಂದೆ ॥ ನಿನ್ನೊಳ್ ॥ ೨ ॥ ತನನೋಡಲುಮಲಪಾತ್ರ ತನುಹಿಂಡಿದರಸಮೂತ್ರ । ತನುಚಂಚಲಿಸಲುಮಾತ್ರನಿನದಾಯಿತುಸೂತ್ರ ॥ ನಿನ್ನೊಳ್ ॥ ೩ ॥ ಪ್ರಾಣ ವೆಂಬುದುಸೂಲು ತ್ರಾಣವಾಯ್ತದರೊಳು । ಜ್ಞಾನಮೂರುತಿಯೊಳು ಕಾಣದಿದು ಕೇಳು ॥ ನಿನ್ನೊಳು ॥ ೪ ॥ ಮನವೆಂಬುದು ನೀನಲ್ಲ ಮನಸುಪ್ತಿ ಹೊಳಿರಲಿಲ್ಲ ಮನವೆ ಈ ಜಗವೆಲ್ಲ ನಿನಗೀತೊಡಕಿಲ್ಲ ॥ ನಿನ್ನೊಳ್ ॥ ೫ ॥ ಅಹವೆಂಬುದೆಬಳಿಕಲ್ಲಿ ಅಹಮಾಯದಿಬೆರತಲ್ಲಿ । ಬಹುವಾಯ್ತಿದೆ ನಿನ್ನಲ್ಲಿ ಸಹಜಾಶ್ರಯದಲ್ಲಿ ॥ ನಿನ್ನೊಳ್ ॥ ೬ ॥ ಇದುಹಮ್ಮದು ನೀನಲ್ಲ ಇದುನಿನ್ನ ನರಿಯದಲ್ಲ । ಒದಗತಿದರಿಂದೆಲ್ಲ ಇದು ನಿನ್ನೊಳಗಿಲ್ಲ ॥ ನಿನ್ನೊಳ್ ॥ ೭ ॥ ಪೆರತೇನೊಂದಲಿಲ್ಲ ಪರಮಾನಂದವೆಯೆಲ್ಲ । ಪರಮಾರ್ಥವಿಹನ್ನೆಲ್ಲ । ಗುರು ಶಂಕರಬಲ್ಲ । ನಿನ್ನೊಳ್ ನೋಡದೆ ನಿನ್ನ ಬಣ್ಣ ಬಾಡಿತು ಜೀವ ॥ ೮ ॥

೩೨

ಹೇಗೆ ನಿಮ್ಮ ಚರಣಕಾಂಬೆನು ಯೋಗಿಜನಶರಣ ಎಂಬಂತೆ ಭ್ರಾಂತ ನಾಗಬೇಡ ನಿಜದೊಳು ಶಾಂತನಾಗಮೂಢ । ಸಂತತ ಬಹುವಿಧಚಿಂತೆಯು ಪುಟ್ಟಿಸಿ ಇಂತಿರುವೀಮಲಯಂತ್ರವಮೋಹಿಸಿ ಭ್ರಾಂತನಾಗಬೇಡ ॥ ಪಲ್ಲವಿ ॥

ಸ್ನಾನಹರಿಯಲಿಲ್ಲ । ಮಡಿಯುವಿಧಾನದೊರೆಯಲಿಲ್ಲ । ಮಾನವ ನೆಂಬಭಿದಾನವುಬಂದರು । ಧ್ಯಾನದಹರಿಯ ನಿಧಾನವಕಾಣದೆ । ಭ್ರಾಂತ ನಾಗ ॥ ೧ ॥ ಹರಿಕೆಮಾಡಲಿಲ್ಲ । ಕಣ್ಣಿಗೆಹರಿಯಕಾಣಲಿಲ್ಲ ॥ ಹರಿಹರ ನಾಮದ ಶರೀರದೊಳಡಗಿಹ । ಸ್ಥಿರಚಿನ್ಮೂರ್ತಿಯನರಿಯದೆ ಬಳಲುತ । ಭ್ರಾಂತನಾಗಬೇಡ ॥ ೨ ॥ ಭಜನೆತೀರಲಿಲ್ಲ । ಜನ್ಮದರುಜೆಗೆಪಾರವಿಲ್ಲ । ಅಜಹರಿರುದ್ರರ ಭಜನೆಗಳೇನೆಂಬುದು । ಸುಜನರುಪೇಳುವ ನಿಜಕೆಂದರೆಯದೆ॥ ಭ್ರಾಂತನಾಗಬೇಡ ॥ ೩ ॥ ಖಂಡವಳಿಯಲಿಲ್ಲ । ತನ್ನೊಳಖಂಡ ಪೊಳೆಯ ಲಿಲ್ಲ । ಚಂಡಿಸಿನಾರೆನಲದನರಿಯದ । ಭಂಡನಾಗಿ ಮಲಭಾಂಡವ ತೋ ರುತ ॥ ಭ್ರಾಂತನಾಗಬೇಡ ॥ ೪ ॥ ಒಳಗೆ ತೊಳೆಯಲಿಲ್ಲ । ಮನಸಿನ । ಕಳವಳಕೆಡಲಿಲ್ಲ । ಪೊಳೆಯುವ ಕುಲಛಲ ಮನವನುಳೆಯುವ । ಕುಲ ಗುರುಶಂಕರನಡಿಗಳ ಪಿಡಿಯದೆ । ಭ್ರಾಂತನಾಗಬೇಡ ॥ ೫ ॥

೩೩

ಬೇವು ಬೆಲ್ಲದೊಳಿಡಲೇನು ಫಲವೆಂಬಂತೆ

ಏತರಬದುಕಿದಕೇತಕೆ ಬಳಲುತ ಪಾತಕಿಯಾಗುವೆ ಯೆಲೆಮನುಜಾ ॥ ಪಲ್ಲವಿ ॥

ಚೇತನವಿಲ್ಲದ ಭೂತನಶಿವನೆಂಬ ನೀತಿವಂತನ ಮಾಯೆಯ ತನುಜ । ಮಾತಿನೋಳ್ ತೋರುತರೀತಿಯೋಳ್ ಹಾರುತ ಪೂತನಾದೆನು ಎಂಬುದ ನುಜಾ । ಏತರಬದುಕಿದು ॥ ಅನು ॥ ಮುಕ್ತಿಗೆ ಪರಮವಿರಕ್ತಿಯೆ ಬೇಕದು ಯುಕ್ತಿಗೆ ಕೈಸೇರುವದಲ್ಲ । ಭಕ್ತಿಗೊಡಲ್ಲಿ ನಿಜಶಕ್ತಿಗೂಡಿದ ಗುರುಭಕ್ತ ನಿಗದುದೂರದೊಳಿಲ್ಲ ॥ ಏತರಬದುಕು ॥ ೧ ॥ ಬೆಳದವು ಮಲದೊಳು ಬೆಳಗವು ನಿಜದೊಳು ಮುಳುಗಿವೆ ಪೋಹದಿ ಕರಣಗಳು । ಸುಳಿಯುವು ಸುಖದೊಳು ಉಳಿಯವು ತನುಗಳು ಕಳೆಯವು ಮುಂದಕು ಜನ್ಮಗಳು ॥

ಏತರ ॥ ೨ ॥ ಕಾತರಕೆಡಲಿಲ್ಲ । ಪ್ರೀತಿಜನಿಸಲಿಲ್ಲ । ಮಾತಿನೊಳಾಯಿತು ಫಲವೆಲ್ಲ । ಭೀತಿವಾರ್ತೆಗಳಿಲ್ಲದಾತ್ಮತತ್ವವನೆಲ್ಲ ನಾಥನ ಗುರುಶಂಕರ ಬಲ್ಲ । ಏತರಬದುಕಿದೇತಕೆ ॥ ೩ ॥

೩೪

ಏಕೆನಿಜದೊಳಗೇಕನಾಗದೆ ಶೋಕಿಸುವೆ ಯೆಲೆಜೀವನೆ । ಏಕವೆಂಬುದಬೇಕು ಯೆಲ್ಲಿಗು ಸಾಕುಬಿಡುಪ್ರಸಿಭಾವನೆ ॥ ಪಲ್ಲವಿ ॥

ಮರುಳನಾಗುವಹರಿಯು ಜೆಳಗುವ ಠಾವುಕಾಣದೆಬಿದ್ದರೆ । ದುರುಳನೆನಿಸುವ ಕರುಣದೊಳಗವನೆರಡುಭಾವಗಳಿದ್ದರೆ । ಯೆರಡನೆಯುಮಾತಾಡಬೇಡೆಂದರು । ಪ್ರವರುಪೇಳ್‌ಬದರೆಮರಣಜನ್ಮವಪೊತ್ತು ತಿರುಗುವ ಕುರುಡರೆಲ್ಲರಶುದ್ಧರೆ ॥ ಏಕೆನಿಜದೊಳು ॥ ೧ ॥ ಒಂದುನುಡಿಯೊಳು ನಿಂದ ಮನುಜನುವಂದ್ಯನಾಗುತ ಬಾಳುವ । ಅಂದಮುಂದಿಂದೆಂದು ನುಡಿದವ ನಿಂದ್ಯನಾಗುತ ಬೀಳುವ । ಹೊಂದದವರನು ಒಂದುವಾಡಲು ಬಂಧುನವುಗಿವನೆನಿಸುವ । ಸಂದುಹುಡುಕುವ ಮಂದಮತಿಯುವ ಬಂಧನಕೆ ಗುರಿಯಾಗುವ । ಏಕೆನಿಜದೊಳಗೇಕನಾಗದೆ ॥ ೨ ॥ ಭಾವದೊಳಗೆರಡಿದ್ದೊಡದು ಬಹು । ಭಾವಗಳಕಲ್ಪಿಸುವುದೈ । ಸಾವುಹುಟ್ಟುಗಳಂದವರಿಯದೆದೇವರಿಂದೇನಪ್ಪುದೈ । ದೇವಗುರುಶಂಕರನ ಭಜಿಸಿನ್ನಾವ ದುಃಖವುತೋರದೆ ಏಕೆನಿಜದೊಳಗೇಕನಾಗದೇ ॥ ೩ ॥

೩೫

ಹೇಳಿಬಾರೋಪೋಗಿ ಹೇಳಿಬಾರಣ್ಣ । ಪೇಳಿದರ್ಥವನೊಳಗೆ ಶಾಂತವ। ತಾಳಿ ಚಿಂತಿಸಿ ನೋಡಿರೆಂದು ॥ ಪಲ್ಲವಿ ॥ ಒಂದೆಜನಿಸದೆ ಮುಂದೆಸಾಯದೆ ಒಂದುಮುಂದುಗಳೆಂಬಯೆರಡರ । ಸಂದಿನೊಳಗಿಹ ಶಿವನಕಂಡರೆ ವಂದನೈಗಳಿನ್ನೇತಕೆಂದು ಹೇಳಿಬಾರೊ ॥ ೧ ॥ ಪ್ರಜ್ಞೆಯೆಂಬುವಖಡ್ಗಪಿಡಿದು । ವಿಘ್ನಹೋತನ ಶಿರವಕಡಿದು । ಅಜ್ಞಭಾವವ ಕಳೆದುನಿಂತೊಡೆ ಯಜ್ಞಕೋಟಿಗಳಾಯಿತೆಂದು । ಹೇಳಿಬಾರೋ ॥೨॥ ಇಹಪರಂಗಳುಯೆಂಬ ದುಷ್ಟಗ್ರಹಗಳನು ಯೆಡಬಿಡದೆಸಂಧಿಸಿ । ಅಹಮಿನೊಳಗದುಂಮುಳುಗಿನಿಂತೊಡೆ ಗ್ರಹತರ್ಪಣವಾಯಿತೆಂದು॥ ಹೇಳಿಬಾರೋ ॥೩॥ ಎಂಟುಗೇಣಿನ ಹಟ್ಟಿಯೊಳು ಮೂರೆಂಟುಮಲೆಯ ಕೋಣೆಯೊಳಗಿಹ। ಗಂಟುಕಾಣದೆ ಬರಬೆ ಘಂಟೆಗೆ ಭಂಟರಾಗಿ

ಕೆಟ್ಟರೆಂದು ॥ ಹೇಳಿ ॥ ೪ ॥ ಪಂಚಪದರಚೀಲದೊಳಗೆ ಹೊಂಚಿಮಿಂಚುತ್ತಿರುವ ರತ್ನದ । ಪಂಚವರ್ಣತಿಳಿದಯೋಗಿಗೆ ಪಂಚಸೂತಕವಿಲ್ಲವೆಂದು । ಹೇಳಿಬಾ ॥ ೫ ॥ ಇಲ್ಲವೆಂಬುದಕಂಡು । ಕಲ್ಲುಬೊಂಬೆಗಳನ್ನು ಪೂಜಿಸೆ । ಕಲ್ಲೆಶಿವನೋ । ಶಿವನೆಕಲ್ಲೋ। ಬಲ್ಲೊಡಿನ್ನೀವ್ ಪೇಳಿರೆಂದು ॥ ಹೇಳಿ ॥೬॥ ಹಿಂದೆಪುಟ್ಟಿದ ಹಿರಿಯರಿಲ್ಲ । ಮುಂದೆಪುಟ್ಟುವಕಿರಿಯರಿಲ್ಲ । ಸಂದಿಗೊಂದಿಯ ಸಂಗವಿಲ್ಲಿದು ಹೊಂದಿದರೆ ಬಹುಚೆಂದವೆಂದು ॥ ಹೇಳಿ ॥ ೭ ॥ ಎಲ್ಲರೊಳು ತಾ ಸೇರಬೇಕವರೆಲ್ಲರೂ ಓಡಾಡಬೇಕು । ಅಲ್ಲಿ ಇಲ್ಲೊಂದಾಗಬೇಕಿದು । ಇಲ್ಲದಿದ್ದೊಡೆ ಸುಳ್ಳದೆಂದು ॥ ಹೇಳಿಬಾ ॥ ೮ ॥ ಮೂರುಪುರಗಳ । ಮೂರು ಗುಣಗಳ । ಮೂರುಮಲಗಳ । ಮೂರವಸ್ಥೆಯ । ಮೂರು ಭಟರನು ಮೀರಿ । ಬೆಳಕಿನದಾರಿಯಲಿ ಓಡಾಡಿರೆಂದು ॥ ಹೇಳಿಬಾರೋ ॥ ೯ ॥ ನಾನು ಎಂಬೀ ವಸ್ತುವಿಲ್ಲದೆ ನೀನು ಎಂಬುವದಿಲ್ಲವದರಿಂ। ನಾನೆನೀನೆಂದರಿಯದೆಸಗುವ ಧ್ಯಾನಮೌನಗಳೇತಕೆಂದು ॥ ಹೇಳಿಬಾರೊ ॥ ೧೦ ॥ ಎಂದಿಗಾದರು ಸಾವು ತಪ್ಪದು ಎಂದು ತಿಳಿಯದಮೇಲು । ಸುಮ್ಮನೆ ಇಂದುನಾಳೆಯೆಂದು ಕಳೆದರೆ । ಮುಂದೆ ಯಮಕಾದಿರುವನೆಂದು ಹೇಳಿಬಾ ॥ ೧೧ ॥ ಬಾಲನಾಗುತ ಬೆಳೆದು । ಯೌವನತಾಳಿ ಬಳಿಕೀತನವು ಮುಪ್ಪಿನ । ಚೀಲವಾಗುತಕೆಡಲಂ ನೀವಾಕಾಲಪಾಶದಿ ಬೀಳ್ವಿರೆಂದು । ಹೇಳಿಬಾರೋ ॥ ಮರಣವೆಂಬುವಸ್ಮರಿಸಿ ಕೊಂಬಿರಿ ಧರೆಯಸುಖವನ್ನೇಕೆಂಬಿರಿ । ಮರತುಮರಣವ ಮರಳಿ ಭೋಗದಿ ಬೆರೆತು ದುಃಖಿಗಳಾದಿರೆಂದು । ಹೇಳಿಬಾ ॥ ೧೩ ॥ ಮುಂದೆಬರುವುದು ಮುಪ್ಪು । ಅಲ್ಲಾನಂದದೆಂಬುದೆ ಇಲ್ಲವವರಿಂ । ಮಂದಬುದ್ಧಿಯ ಬಿಟ್ಟು । ನಿತ್ಯಾನಂದಪದದಲಿ ಸೇರಿರೆಂದು ಹೇಳಿಬಾ ॥ ೧೪ ॥ ಮಂಕುತನನಿಮಗೇತಕೆ । ಬಿಡುವಾತಂಕವಿಲ್ಲದೆ ನಮ್ಮ ಸದ್ಗುರು । ಶಂಕರಾರ್ಯನ ಪದವಸೇರಿ ಶಂಕೆ ಯಿಲ್ಲದೆ ಬಾಳಿರೆಂದು । ಹೇಳಿಬಾರೊ ಹೋಗಿಹೇಳಿಬಾರಣ್ಣ ॥ ಪೇಳಿದರ್ಥವ ನೊಳಗೆ । ಶಾಂತವತಾಳಿ ಚಿಂತಿಸಿ ನೋಡಿರೆಂದು ॥ ಹೇಳಿ ॥ ೧೫ ॥

೩೬

ಪರಿಪೂರ್ಣ ಪರಮಹಂಸಾ ಎಂಬಂತೆ:

ಜಯದೇಶಿಕಾಗ್ರಗಣ್ಯ । ಜಯತುಭವ ಜಯನಿವಾರಣವರೇಣ್ಯ । ಜಯತುಸಜ್ಜನಶರಣ್ಯ । ಜಯತು ಚಿನ್ಮಯವಚೋತೀತಪುಣ್ಯ ॥ ಪ ॥

ಆನಂದಶರಧಿಯಾಗಿ । ಮರೆತದನು ಕಾಣುವೀಶಿಲೆಗೆಬಾಗಿ । ನಾನಾ ಶರೀರಿಯಾಗಿ । ಗುರುರಾಯ । ನಾನಾದೆ ಜನ್ಮರೋಗಿ ॥ ೧ ॥ ಭಿನ್ನವನು ಎನ್ನೊಳಿಟ್ಟೆ । ಎನ್ನೊಳಾ । ಧನ್ಯದೊಳಗೆನ್ನಬಿಟ್ಟೆ । ಬಣ್ಣದಲಿ ಭ್ರಾಂತಿಪಟ್ಟೆ ಗುರುರಾಯ । ಜನ್ಮಪಟ್ಟವನು ತೊಟ್ಟೆ ॥ ೨ ॥ ನೀನೆನ್ನಮತಿಗೆ ಸೂತ್ರಗುರುರಾಯ ನಾನಿನ್ನಬಾಲಪುತ್ರ ॥ ೩ ॥ ಓಂಕಾರರೂಪನೀನು । ಎಡಬಿಡದ । ಸಂಕಟದ । ಕೂಪನಾನು । ಶಂಕರಾನಂದ ನೀನು ನಿನ್ನಪದ । ಕಿಂಕರರ ಕಂದ ನಾನು ॥ ೪ ॥

೩೭

ಭಂಗವೇಕೆಪಡುವೆ । ನೀನಿ । ಸ್ಸಂಗಿಯಾಗೋ ಮನವೇ । ರಂಗಗೂಡಿ ಬಹಿ । ರಂಗವಾಗಿ ತನು । ಸಂಗದಿಂದ ನಿಜಲಿಂಗವ ಕಾಣದೆ ॥ ಪಲ್ಲವಿ ॥

ಬಂಧುಬಳಗವೆಂದು । ಸಡಗರದಿಂದ ಬಳಲಿನೊಂದು । ಸಂದುತಿಳಿಯದೆ ಹಿಂದೆವುಳಿಯದೆ । ಎಂದಿನಂತಲೆ । ಹೊಂದುತ ತನುಗಳ ॥ ೧ ॥ ಆತ್ಮಭಾವ ವಳಿದು । ಇಲ್ಲದ ಜಾತಿಯಲ್ಲಿ ಸುಳಿದು । ಛಾತಿಪ್ರೋಗಿಯುಮ । ಭೀತಿಗಾಗಿ ಬಹು । ನಾಥನಾಗಿ ಕಡುಪಾತಕಿಯಾಗುತ ॥ ೨ ॥ ಶಂಕೆಯಲ್ಲಿ ಪಳಗಿ । ಪಾಪದ । ಪಂಕದಲ್ಲಿ ಮುಳುಗಿ । ಸಂಕಟಾಟವಿಗೆ । ಬೆಂಕಿಯಾದ ಗುರು । ಶಂಕರಾರ್ಯನಿಗೆ ಕಿಂಕರನಾಗತೆ ॥ ೩ ॥

೩೮

ವಂದನಂಗುರುವೀರನೆ । ನಿನ । ಗೊಂದನವ್ರ ಸುಖಸಾರನೆ । ಬಂಧಮೋಕ್ಷಗಳೆಂಬಯೆರಡರ । ಸಂದುತೋರದಧೀರನೆ ॥ ಪಲ್ಲವಿ ॥

ತನ್ನನಿಜವನುನೋಡನು । ಈ । ಭಿನ್ನವಳಿಯದ ಮೂಢನು । ನಿನ್ನ ಪಾದವಕಂಡಮನುಜನು । ಜನ್ಮವಳಿದಾರೂಢನು ॥ ೧ ॥ ಹಿಂದೆಸುಕೃತವ ಮಾಡಿದೆ । ಅದ । ರಿಂದನಿನ್ನೊಳುಕೂಡಿದೆ । ಬಂಧವಿಲ್ಲದ ಪೂರ್ಣಸಹಜಾನಂದ ಪದವಿಯನೋಡಿದೆ ॥ ೨ ॥ ತಂದೆತಾಯಿಗಳಾದರು ಬಹು । ಮುಂದಿಕಳಿಯದೆ ಪೋದರು । ತಂದೆ ಸದ್ಗುರುಶಂಕರಾರ್ಯನ । ಹಿಂದೆನಿಲ್ಲುವದೇವರು ॥

೩೯

ಬೇವು ಬೆಲ್ಲದೊಳಿಡಲೇನು ಫಲ ಎಂಬಂತೆ

ಏತಕೆ ಮಲದೇಹವ ನಾನೆನ್ನುತ । ಘಾತಕಿಯಾಗುವೆಯೆಲೆಜೀವ ।

ಭೀತಿಯಳಿಯದ ಕರ್ಮದಕಥೆ ಬರಿ ಮಾತೆಂಬುದೆ ಯೋಗಿಯಭಾವ ॥ ಪ ॥

ಭಿನ್ನದಜಗವನು ಚಿನ್ಮಯವೆನಿಸುವ । ನಿನ್ನ ನಿಜಾಸಾರವಬಿಟ್ಟೆ । ಮಣ್ಣಿನಬಣ್ಣಕೆಮೋಹಿಸಿತಿರುಗುತ । ಜನ್ಮಜರಾದಿಭವತೊಟ್ಟೆ ॥ ೧ । ಮಾತಿನೊಳಂದಿಸುವ ಮೈಲಿಗೆಯುಂಟೇ । ಸೂತಕವೆಂದೊಡೆಮೊರಗಾದೆ । ಆತ್ಮನುನೀನು ಸಮಸ್ತವಿಕಾರಾ । ತೀತನುಯೆಂದೊಡೆಬೆರಗಾದೆ ॥ ೨ ॥ ಜನಿಸಿದೆನೆಂದೊಡ ಮಾಂಸಮಲಂಗಳ । ತನುವಿನರೂಪವೆನೀನಾದೆ ॥ ತನುವಿನಸಂಗವ ಕಳೆದುಳಿದರೆ ಸುಖಚಿನುಮಯನೆನಿಸುತ ಶಿವನಾದೆ ॥ ೩ ॥ ಪರಿಪರಿದೇವರಪದಕೆರಗಿದರುಂ । ಮರಣಭಯಬೆಂಬಿಡಲಿಲ್ಲ । ಮರವೆಯ ಮೂಲವ ಮುರಿದರೆ ಮುಂದಕೆ । ಸರಣೆಂಬುವ ಕೆಡನುಡಿಯಿಲ್ಲ ॥ ೪ ॥ ಎಣಿಸುತದೇವರ ನಾಮವಲೆಕ್ಕದಿ । ಗುಣಿಸಲು ಕತ್ತಲೆ ಬಲವಾಯ್ತು । ಜನಿಸುವ ಸಾಯುವ ಮೋದವಕಳೆದರೆ । ತನುವಿನ । ದುಃಖಕೆ ಕೊನೆಯಾಯ್ತು ॥ ೫ ॥ ಬೆಳೆದರು ಗಂಗಾತೀರದಿ ತನುವಿದು । ಕಳೆಯುವ ಕಳವಳ ಕಳೆದೀತೆ । ತಿಳಿದೊಡೆ ತನ್ನೊಳಗಿಹ ತತ್ವವತ । ನ್ನಳಿಯುವ ಮೃತ್ಯುವು ಸುಳಿದೀತೆ ॥ ೬ ॥ ಶಂಕೆಯು ಪರಿಹರಿಸದ ಜಡಮೂರ್ತಿಗೆ । ಕಿಂಕರನಾಗುಬುದೆ ರೋಗ । ಶಂಕರಗುರುವಿಗೆ ಶರಣೆನಲದುಭವಸಂಕಟ ಪರಿಹಾರಕೆ ಯೋಗ ॥೭॥

## ೪೦

### ಶ್ರೀಗುರುವಚನೋಪದೇಶವ ಎಂಬಂತೆ

ತಾನಾರೋ ತನ್ನ ತತ್ವವಕಾಣದಿರೆ ಮುಂದೆ ಮಾಣದೀ ಮರಣ ವಾಗುವ ದೇಹವು । ತಾನಾಗಿಜಗವೆಲ್ಲಭಿನ್ನವಿಲ್ಲದ ಸಹಜಾನಂದಪದವೆ ನಿಲ್ಲುವ ಯೋಗವು ॥ ಪ ॥

ಕುಣಿಸುತಂಗಗಳ ಮುಂದೆಮೆಯನೋಡುತ ತಾನು । ತನ್ನವಾಗಿ ಭವ ದುಃಖದೊಳು ಬೀಳುವ । ತನುಸಂಗಮವನು ತನ್ನ ಮನನದಿಂ ಕಳೆದಲ್ಲಿ । ಜನಿಸಿಸಾಯದ ರೂಪವನು । ತಾಳುವ ॥ ೧ ॥ ಮನೆಯೊಳಿರುವ ತಾನಾಮನೆ ಯಾಗದಿರುವಂತೆ । ತನುವಿನೊಳಿಹ ತಾನು । ತನುವಾಗನು । ತನುಮಾಂಸ ಮಯವಾಗಿ ಬೆಳಗುವಂದದಿ ತಾನು। ಚಿನುಮಯನಾಗಿನಿಂದೊಡೆ ಸಾಯನು॥೨॥ ಜನಿಸುವದೇಹತಾನಾಗಲು ತನ್ನೊಳು । ಕೊನೆಗಾಣದಿಹ ಸಾವು ನೆಲೆ

ಯಾಯಿತು । ಮನವನಿಟ್ಟರೆ ಶಂಕರಾರ್ಯನಪದದೊಳು ಜನಿಸಿಸಾಯುವ ದುಃಖಹತವಾಯಿತು ॥ ೩ ॥

೪೧

ತಿಳಿದೋಗಿಮರ್ಮವ ಹೇಳಿ ಎಂಬಂತೆ

ಸುಮ್ಮನೆ ಬ್ರಹ್ಮನಾಗುವನೆ । ಮೂಲ । ಹಮ್ಮೆಲ್ಲ ಲಯವಾಗಿ ಉಳಿಯದೆತಾನೆ ॥ ಪಲ್ಲವಿ ॥

ಸುಮ್ಮನಿರ್ದರು ಸುಖಿಸುವನೆ । ಇದು । ನಮ್ಮದೆಂಬುದನು ಕೊಂದಿರುವ ಸಾಹಸನೆ । ಹೊಂದಿರುವ ಚದ್ರಸನೆ । ಸವ್ಮಾನವನು ವಿಹಾರಿದವನೇ । ಮೃತ್ಯುಸಂಹಾರಿಯಾಗಿ ತಾಂಡವದೊಳಿರುವನೇ । ಕುಂಡಲಿಯುವಿಹಾರುವನೆ॥೧॥ ಪುಸ್ತಕವನು ಮುಚ್ಚಲಿಲ್ಲ । ತಾನಾ । ಪುಸ್ತಕದೊಳಗೆಲ್ಲ ಶಿವನಾಗಲಿಲ್ಲ । ಕೇಶವನಾಗಲಿಲ್ಲ । ಸುಸ್ತಗಳ್ ಬಯಲಾಗಲಿಲ್ಲ । ಪರವಸ್ತುವೆಂಬುವನುದಿಯೊಳಗಾಗಲಿಲ್ಲ । ತನ್ನೊಳಗಾಗಲಿಲ್ಲ ॥ ೨ ॥ ಮರಣಭೀತಿಯ ಬೇರಸುಡದೆ । ತನ್ನ ಪರಮಾನಂದವನೆ ಇಲ್ಲಬಯುಂ ನೆಡದೆ । ಶರೀರದೊಳಾಭಿಮಾನಕೆಡದೆ । ನಮ್ಮ ಗುರುಶಂಕರನಿಗೆ ಚಿತ್ತವನುವೊಪ್ಪಿಸದೆ ಚಿತ್ತವನುವೊಪ್ಪಿಸದೆ ॥ ೩ ॥

೪೨

ನಿನ್ನನೀನರಿಯದೆ ಭಿನ್ನವಾಯಿತು । ನಿನ್ನ ಬಣ್ಣ ಜೀವ ಭಿನ್ನದೊಳ್ ಬೆಳಗುವ । ನಿನ್ನನೀತಿಳಿದೊಡೆ ನೀನೆ ದೇವ ॥ ಪಲ್ಲವಿ ॥ ತರುಣಿಸುತರನೆಲ್ಲ ಹಿತರೆಂದುಕೂಡುವೆ । ಮೋಹಿಯಾಗಿ ನರಕದೋಳ್ ಬಹುದುಃಖದುರಿಯಲ್ಲಿ ಬಾಡುವೆ ದೇಹಿಯಾಗಿ ॥ ೧ ॥ ತಾಪಕ್ಕೆ ಶಿಲುಕದೆ । ರೂಪುನಾಮಗಳಿಂದ ಪಾಪಿಯಾಗಿ । ರೂಪುಕೆಟ್ಟರೆ ನೀನಿರ್ಲೇಪನಾಗುವೆ । ಸುಖರೂಪಿಯಾಗಿ ॥ ೨ ॥ ಜನಿಸಿಸಾಯುವ ಮಾರಂತನುವೇನಾನೆಂದಲ್ಲಿ ಬದ್ಧನಾದೆ । ತನುಮೋಹ ಕೆಟ್ಟು ನೀ ಚಿನುಮಯನಾದಲ್ಲಿ ಶುದ್ಧನಾದೆ ॥ ೩ ॥ ಧರೆಯದೇವರಿಗೆಲ್ಲ ಯೆರಗಿದರೀ ಬಂಧಪೋಗಲಿಲ್ಲ । ಕೊರತೆತೋರದ ನಿತ್ಯನಿರತಿಶಯಾನಂದವಾಗಲಿಲ್ಲ ॥ ೪ ॥ ಒಡಲಮೋಹದ ಮೂಲಕೆಡದೆ ನೀ ಸುಮ್ಮನೆ ಮುಕ್ತನಲ್ಲ । ನುಡಿಯಿಂದ ನೀ ಜಗದೊಡೆಯನೆಂಬುವ ಮಾತು ಭುಕ್ತಿಗೆಲ್ಲ ॥ ೫ ॥ ಮನದಲ್ಲಿ ವಿಷಯದ ಮನನವಿದ್ದರೆ ಬ್ರಹ್ಮನಾಗಲಾರೆ । ಅಣಿಮಾದಿಸಿದ್ಧಿಯತೃಣದಂತೆ

ತೋರಿದೊಡಾಗಧೀರ ॥ ೬ ॥ ಮರಣಭೀತಿಯುಪೋತ್ತು ಮರುಳನಾಗಿರೆ ಜನ್ಮ ರೋಗಿಯಾದೆ। ಗುರುಶಂಕರನ ಪಾವದೊರದೊಡಲ್ಲಿಗೆ ನಿತ್ಯಭೋಗಿಯಾದೆ॥೭॥

೪೩

ತಿಳಿದೊಡೀಮರ್ಮವ ಹೇಳಿ ಎಂಬಂತೆ

ಬರಿದೆತೋರದು ನಿಜಾನಂದ । ಈ ಶರೀರಮರೆಯದೆ ಪರಿಯದೀ ಬಂಧ ॥ ಪಲ್ಲವಿ ॥

ಎರಡಿಲ್ಲವದರಿಂದಮರೆತ । ಮುಂದೆ । ಮರವೆಯರೂಪುನಾಮಗಳಲ್ಲಿ ಬೆರತ । ನೇಮಗಳಲ್ಲಿಬೆರತ । ಚರಿಸುತ ಎಗವಾದ ನೀತ । ಇದನರಿತವನಖಿಲಯೋಗುದೊಳು ಪ್ರಖ್ಯಾತಭೋಗದೊಳುವಿಖ್ಯಾತ ॥ ೧ ॥ ನಂದೆಂದಾದನು ತಾನೆಭ್ರಾಂತ । ತನ್ನ ಹಿಂದುಮುಂದೆಲ್ಲರೂಪಿಲ್ಲದೆ ನಿಂತ ದೀಪಿಲ್ಲದೆ ನಿಂತ । ಮುಂದಾದನವರೊಳನಂತ ಇವನಾ । ನಂದನವರಿತವನೀಗ ನಿಶ್ಚಿಂತತಾನೀಗ॥೨॥ ಇಲ್ಲವೆನ್ನುವರಲ್ಲಿರುವನು ನಾನು । ಬಲ್ಲೆನೆಂಬುವರೊಳಗಿಲ್ಲವಾಗುವನು । ಎಲ್ಲೆಲ್ಲೊ ಪೋಗುವನು । ಎಲ್ಲೆಲ್ಲು ತುಂಬಿತೂಗುವನು । ದೃಷ್ಟಿ । ಇಲ್ಲದೆ ತನ್ನ ನೋಡಿದರೆ ಕಾಣುವನು । ಕೂಡಿದರೆ ಕಾಣುವನು ॥ ೩ ॥ ಬರಿಮಾತಿನೊಳು ಬ್ರಹ್ಮವಿಲ್ಲ । ನಿಜವನರಿವನೊಳು ಬೇರೆಕಳವಳವಿಲ್ಲ । ಮೀಕಳವಳವಿಲ್ಲ ಶರೀರವಾಯಿತು ಲೋಕವೆಲ್ಲ । ಇದನು ಗುರುಶಂಕರನಬೇಡಿ ಬೆರದಾತಬಲ್ಲ ಕೂಡಿಬೆರದಾತಬಲ್ಲ ॥ ೪ ॥

೪೪

ತಿಳಿದೊಡೀಮರ್ಮವನು ಹೇಳಿ ಎಂಬಂತೆ

ಸಾಧುಸೇವೆಯೊಳಾಡೊಮನುಜ । ಭೇದಭಾವಮಾಡಿದೊಡೆ ನೀ ಜಗದೊಳುಜನುಜ । ಮೂಜಗದೊಳುದನುಜ ॥ಪ॥ ವಾದವಾಡುತ ಮೂಢನಾಗಿ । ನಾನಾ । ವೇದಶಾಸ್ತ್ರಗಳ ಪಾಡುತ ಮೂಢನಾಗಿ । ನೋಡುತ ಗೂಢನಾಗಿ ॥ ಬೀದಿ ಬಂಧನವೆಲ್ಲ ಪೋಗಿ । ಗುರು । ಭೋಧೆಯಿಂ ಜಗವ ತೊಟ್ಟಿಲೊಳಿಟ್ಟು ತೂಗಿ । ದೃಷ್ಟಿಯೊಳಿಟ್ಟು ತೂಗಿ ॥೧॥ ಒಂದಾದಬಯಲಳವಟ್ಟು ಅಲ್ಲಿ । ಹೊಂದಿತುಂಬಿರುವತನ್ನೊಳುದೃಷ್ಟಿಯಿಟ್ಟು । ಭಿನ್ನವನೆಲ್ಲಬಿಟ್ಟು । ಬಿಂದುನಾದಗಳೆಲ್ಲ ಕೆಟ್ಟು । ತಾನು । ಮುಂದಾಗುವಂದ ತನ್ನೊಳಗಳವಟ್ಟು । ಜನ್ಮದ ಮೂಲಸುಟ್ಟು ॥ ೨ ॥ ನಿಲುಗಡೆ ಕಾಣವಧರ್ಮ । ಮಾಡಿ । ಫಲವೇನು । ನೋಡವೆ ಪ್ರಾರಬ್ಧಕರ್ಮಮೀ ಪ್ರಾರಬ್ಧಕರ್ಮ । ತಿಳಿಯಬೇಕೊಳಗಿ

ನವುರ್ಮ । ಅಲ್ಲಿ । ಒಳಹೊರಗೆಂಬುದೆ ಬಹುಪಾಪಕರ್ಮ । ದುಸ್ತರ ಘೋರ ಕರ್ಮ ॥ ೩ ॥ ಮರಣಭೀತಿಯನು ನೀಗಾಡು ಅಂತಃ । ಕರಣದಕಳವಳವಡಗಿತೆ ನೋಡು । ಅಲ್ಲಡಗಿತೆನೋಡು । ಹರಶರಣರನೆಕೊಂಡಾಡು । ನಮ್ಮ ಗುರು ಶಂಕರಾರ್ಯನ ಕರುಣವಬೇಡು । ಆ ಚರಣವಬೇಡು ॥ ೪ ॥

೪೫

ಗುರುವೆ ನಂಬಿರುವೆಯೆಂದಿರುವೆಯಾದೊಡೆ ಮುಂದೆಮರವೆ ಮೋಹವ ಹೊಂದಿರುವೆ ನೀಮನವೆ । ಎರಡುಕಾಣದ ಹುಟ್ಟುಕುರುಡರಾಡುವ ದೊಡ್ಡ । ಸುನಪದವಿಗಳ ಸುಸ್ಥಿರವೆ ದುಸ್ತರವೆ ॥ ಪಲ್ಲವಿ ॥

ನಿನ್ನಸರಿಯೆ ಕೇಳನ್ಯವಾಗಿಹಶಿವ । ನನ್ನನೀಕಾಣುವಪರಿಯೆಂತು ಮನವೇ । ಭಿನ್ನವಾಗಿಹ ಶಿವನನ್ನು ಕಾಣದ ಪೂಜೆ । ಯನ್ನು ಮಾಡುವೆನೆಂಬ ಮರುಳಾಟತರವೇ ॥ ೧ ॥ ನೀನಿಲ್ಲದಿರಲಿನ್ನು ಹೂಣುವ ಹೆಣವಿದ । ನಾನೆಂದು ಪೇಳುವೆ ನೋಡಿದು ನಿಜವೆ ॥ ಜ್ಞಾನಮೂರುತಿ ನಿನ್ನ ಕಾಣದೀದೇಹವೆ । ನೀನಾಗಿ ನಾನಾಭಿದಾನ ಹೊಂದಿರುವೆ ॥೨॥ ಪರವಸ್ತುವಿದ ಗೊತ್ತುಗುರಿಯ ನೀನರಿಯದೆ । ನರಕನಾಕಗಳೆಂದು ತಿರುಗಾಡುತಿರುವೇ । ತೊರೆದು ಸಂಕಲ್ಪವ ಧರಿಸುವ ಕರ್ಮವ । ಗುರುಶಂಕರನ ಕೂಡುಪರಮನಾಗಿರುವೆ ॥ ೩ ॥

೪೬

ತಿಳಿದೋಡಿಮರ್ಮವಹೇಳಿ ಎಂಬಂತೆ

ಗುರುವೇಗತಿಯೆನ್ನುಮನವೇ । ತತ್ವ । ಗುರುವಿನ ಪದಕಿಂತ ಪೆರ ತೊಂದು ಘನವೇ ॥ ಪಲ್ಲವಿ ॥

ಮರವೆಯಿಂ ಮರುಳನಾಗಿರುವೆ । ಮೂಳೆ । ನರಮಾಂಸತನುವ ನಾನೆಂಬುದು ತರವೇ । ಅರಿಯದೆ ಹಿಂದೆ ನೊಂದಿರುವ । ಮುಂದೆ ಕೊರತೆ ಯಿಲ್ಲದೆ ನಿಜಾನಂದದೊಳಿರುವೆ ॥ ಅ. ಪ ॥

ಧನಧಾನ್ಯ ಬಂಧುಭಾಗ್ಯಗಳು । ನಿನ್ನ । ಘನವನೀನರಿಯದ ಮಾಯ ಕಾರ್ಯಗಳು । ಕೊನೆಗಾಣದಿರುವ ದುಃಖಗಳು । ಅಲ್ಲಿ । ಮನವಿಟ್ಟನರನಿಗೆ ಬಿಡದ ಕೋಳಗಳು ॥ ೧ ॥ ತನ್ನತಾತಿಳಿವ ಸಾಹಸವ । ಬಿಟ್ಟು । ನೀನೆಯಾದರೆ ಸೇವಿಸುವ ಸಿದ್ಧರಸವ ॥ ೨ ॥ ಕುರುಹಿಲ್ಲವದು ಶೂನ್ಯವಲ್ಲ । ನಿತ್ಯ । ನಿರತಿ

ಶಯಾನಂದ ನುಡಿಯೊಳಗಿಲ್ಲ । ಪರವಾದಿಯಿದನೇನುಬಲ್ಲ । ಅಲ್ಲಿ । ಗುರು ಶಂಕರನ ಬಿಟ್ಟುಪೆರತೇಂಬುದಿಲ್ಲ ॥ ೩ ॥

೪೭

ಪಾಥೇಯುವ ಕಟ್ಟಿರೋ ಎಂಬಂತೆ

ಗುರುವೇಯೆನುವುಸವೇ । ನಿತ್ಯಾನಂದ । ಪರಮುಸ್ತುನೀನಾಗುವೆ ಮರಣಜನ್ಮಗಳೆಂಬ । ಸೆರೆಯೊಳುಸಿಲುಕಿದ ನರರಹಾದಿಯುಬಿಟ್ಟು ಮರವೆಯು ಮರಿದಿಟ್ಟು ॥ ಪಲ್ಲವಿ ॥

ಧೀರತ್ವವನೆತಾಳಿ ಲೋಕವನೆಲ್ಲ । ಮಾರಿಮೃತ್ಯುವನೆಸೀಳಿ । ತೋರಿ ಕೆಡುವ ರೂಪು । ಸೇರಿಪೋಡಾಡುವಾಧಾರವಸ್ತುವಿನ ವಿಸ್ತಾರವ ನೋಡುತ ॥ ೧ ॥ ನಾನೆಂಬುದನುಳಿದುನಂದೆಂಬಭಿ । ಮಾನವೋಹಕಳೆದು ನಾನಾಭೇದ ಗಳಿಂದ ಕಾಣುವೀಜಗದನಿ । ದಾನವಸ್ತುವಿಭಿದಾನವಪಾಡುತ ॥ ೨ ॥ ಪರ ಮಾರ್ಥವನೆತೊಟ್ಟು । ದೇಹೇಂದ್ರಿಯ । ಕರುಣಾತ್ಮತೆಯುಬಿಟ್ಟು । ವಿರತಿ ವಸ್ತ್ರವನುಟ್ಟು ಕೊರತೆಯೆಂಬುದಸುಟ್ಟು । ಭರಣವಿದನು ನಮ್ಮ ಗುರುಶಂಕರ ನೊಳಿಟ್ಟು ॥ ೩ ॥

೪೮

ತಿಳಿದೊಡೀಮರ್ಮವ ಹೇಳಿ ಎಂಬಂತೆ

ಬಹುಕಷ್ಟವನುಪೇಳುವನು । ಮೂಢ । ಸಹಜವಾಗಿರುವ ಈ ಬ್ರಹ್ಮ ಭಾವವನು ॥ ಪಲ್ಲವಿ ॥

ಬಹುಮಾಸದೊಳಗೆತಾಕೂಡಿ । ಅದಕೆ । ಬಹುಶಾಸ್ತ್ರಂಗಳನೋಡು ತಲೆ ಓಡಾಡಿ । ಅಲ್ಲಲ್ಲಿ ಓಡಾಡಿ । ದಹರದೋಳ್ ಕತ್ತಲೆಮೂಡಿ । ತಮ್ಮ ವಿಹಿತವನರಿಯದಮರಳರನೋಡಿ ॥ ಅನುಪಲ್ಲವಿ ॥

ಮೋಹಾತ್ಮರಲ್ಲೆಸೇರುವೆನು । ಒಳಗೆ । ಸೋಹಮೆಂದಾಡುವನಿಜವ ನರಿಯನು । ಸಾಹಸಿಯೆಂದು ಪೇಳುವನು । ತನ್ನ ದೇಹವಕೊಟ್ಟು ಮೃತ್ಯುವಿಗೆ ಪಾಮರನು । ಸಾಕಾರದಲಿಮಗ್ನನಾಗಿ । ಬ್ರಹ್ಮ । ಕ್ಯಾಕಾರವಿಲ್ಲವಾಗಲು ಭ್ರಾಂತನಾಗಿ । ಏಕತ್ವತೋರದೆಪೋಗಿ । ತೋರಿದಾಕಾರದಂದೆಕೂಗುವ ಮೂರ್ಖನಾಗಿ ॥೨॥ ನರಹರಿತಾನೆಯಾಗಿಹನು । ಇದ । ನ್ನರಿಯದೆ ಹರಿಯೆ ನ್ನೆಂತಿವನು ಕಾಣುವನು । ನಮ್ಮ ಗುರುಶಂಕರನಪಾದದೊಳು ಸೇರದವನು ॥

೪೯

ಬಿಡದೈದುಃಖಬಿಡದೈ । ಎಂದೆಂದಿಗು । ಬಿಡದೈ ದುಃಖಬಿಡದೈ । ಕಡೆಯಿಕಾಣದಕರ್ಮ । ದೊಡಲಿದುತಾನಾಗಿ । ಮಡದಿಮಕ್ಕಳುಬಿಟ್ಟು । ಅಡವಿಗೆಪೋದರು ॥ ಪಲ್ಲವಿ ॥

ತಾನಾರೊ ತನ್ನ ನಿದಾನವನರಿಯದೆ । ನಾನಾದೇವರನೆಲ್ಲ । ಧ್ಯಾನ ಮಾಡಿದರಿನ್ನು ॥ ೧ ॥ ದೇಹವೆನಾನೆಂಬ । ಮೋಹವಕಳೆಯದೆ । ಆಹಾರವ ಬಿಟ್ಟ । ಸಾಹಸಿಯಾದರು ಬಿಡದೈ ॥ ೨ ॥ ಮರಣಭೀತಿಯುಪೋಗಿ । ಪರ ಮನೆತಾನಾಗಿ । ಗುರುಶಂಕರಾರ್ಯನೋಳ್ ಬೆರದೇಕನಾಗದೆ । ॥ ಪ ॥

೫೦

ಗಂಧಮುಪೂಯರುಗಾ ಎಂಬಂತೆ

ಸಂಕಟಹರನಾವ । ನಮ್ಮಾ ಶಂಕರಗುರುದೇವ । ಜಿಂಕಿಯಕಿಡಿಗಳು ಭೋಂಕರಿಸುತಿರೆ ಭ । ಯಂಕರರಾಯಕಿಂಕರರೆಸಗುವ ॥ ಪಲ್ಲವಿ ॥

ಮಾಂಸದ ತನುವೆಲ್ಲಿ । ಅಪರಹಂಸನಘನವೆಲ್ಲಿ । ಸಂಶಯುಹರಿವ ನಿ । ಜಾಂಶವನರಿಯದೆ । ವಂಶಕೆಬಳಲುವ । ಸಂಸಾರದೊಳಿಹ ॥ ೧ ॥ ಡಂಭವೆ ಹಿತವಾಗಿ । ಗುರುಚರ । ಣಾಂಬುಜಗಳನೀಗಿ । ರಂಭೆಯುಸುಖದಾ । ಡಂಬರ ಮುಗಿಯುಲು । ಹಂಬಲಿಸುತ ಮಲ । ಕುಂಭದಿಜನಿಸುವ ॥ ೨ ॥ ಬಚ್ಚಲೊಳಗೆ ಮೂಡಿ । ಆಪದ । ಕಿಚ್ಚುಗಳೊಳುಬಾಡಿ । ನಿಶ್ಚಲಪದದೊಳ । ಗೆಚ್ಚರ ವಿಲ್ಲದೆ । ಹೆಚ್ಚಿದಮರಣಕೆ । ಬೆಚ್ಚುತಬಳಲುವ ॥ ೩ ॥

೫೧

ಗುರುವಿನಂಘ್ರಿಯೊಳಗೆ ನಮ್ಮ । ಕರುಣಸೇರಿತು । ಜನ್ಮಮರಣ ಹಾರಿತು ॥ ಪಲ್ಲವಿ ॥

ಮಕ್ಕಳಿಲ್ಲವೆಂಬಮಮತೆ । ದುಃಖವಳಿಯಿತು । ನಮ್ಮ ದಿಕ್ಕು ತೋರಿತು ॥ ೧ ॥ ಬಿಡಿಸಿನಡೆಯುತೋರಿಬರದೆ । ನುಡಿಯಬೇಡಿರೋ । ಸಂತ । ರಡಿಯುಕೂಡಿರೋ ॥ ೨ ॥ ಮುಖದಿಮಾತ್ರತೋರಿ ಕೆಡುವ । ಸುಖವು ಕಾಣಿರೋ । ಇದರ । ಸುಖವಮಾಣಿರೋ ॥ ೩ ॥ ಎಂತೊಬಂತು ಮನುಜ ದೇಹ । ಚಿಂತೆಹತಿಪುದು । ಮುಂದಕಿಂತುದೆಂರೆಯದು ॥ ೪ ॥ ಪರಮಗುರುವಿ ನಂಘ್ರಿಯಲ್ಲಿ । ಶಿರವನಿರಿಸದೆ । ಬಂಧಬರಿದೆಹರಿವುದೇ ॥ ೫ ॥ ಅಂಗಸಂಗ

ವಿರಲು ಲಿಂಗಭಂಗವಾಗದು । ಜನ್ಮ । ವಿಂಗಿಪೋಗದು ॥ ೬ ॥ ಗಂಡಹೆಂಡಿರೆಂದು ಕೂಡಿ ಭಂಡರಾದರು । ಬರಿದೆ । ಖಂಡರಾದರು ॥ ೭ ॥ ಬಚ್ಚಲನ್ನು ಮೆಚ್ಚಿ ಬರಿದೆ । ಹುಚ್ಚರಾದಿರಿ । ಮುಂದ । ಕೆಚ್ಚರಾಗಿರಿ ॥ ೮ ॥ ಕನಕವಾಗಿಬಂದು ಕಳ್ಳ । ತನವಕಲಿಸಿತು ತನ್ನ ॥ ಘನವಗುಡಿಸಿತು ॥ ೯ ॥ ಬಾಲೆಯೆನಲು ಬಿಡದಕಂಠ ಶೂಲವಲ್ಲವೇ । ಅವಳಿಗಾಳಿಯಾಗುವೆ ॥ ೧೦ ॥ ಶಂಕರಾರ್ಯಪೊರೆಯೊಯೆನದೆ ಮಂಕುಕಳೆಯದು । ಮನದಶಂಕೆಪೋಗದು ॥ ೨೦ ॥

೫೨

ಶ್ರೀ ಗುರುವಚನಸುಧಾರಸ ಎಂಬಂತೆ

ನಾಬೇರೆಶಿವನೆಬೇರೆಂದುಪೇಳಿದೊಡಲ್ಲಿ । ನೀಬೇರೆಯಾದ ಮರ್ಮವ ತೋರಿಸೊ ॥ ಪಲ್ಲವಿ ॥ ಲಾಭಾಲಾಭಗಳಲ್ಲಿ ಬಳಲುವೀಮನಸಿಗೆ । ನೀಬೇರೆ ಯಾಗಿ ಭೇದವಹಾರಿಸೊ ॥ ಅನುಪಲ್ಲವಿ ॥

ನಿನ್ನೊಳ್ತೋರಿತೋ ಮೋಹಾಶಿವನೋಳ್ ತೋರಿತೋಭೇದ । ನಿನ್ನೊಳಾದರೆ ನೀನೆಯೆರಡಾದೆಯಲ । ಭಿನ್ನವಾಶಿವನೊಳುಂಟಾಯಿತೆಂದೊಡ ಶಿವನೆ । ಭಿನ್ನಿಸಿ ಜೀವನಾದಂತಾಯಿತಲ್ಲ ॥ ೧ ॥ ಬಳಲುತೀವಿಷಯದೊಳಿಹ ಬುದ್ಧಿವೃತ್ತಿಯು । ಕಳಕೊಂಡುದಹರಾಕಾಶದಿ ಸೇರಿಸಿ । ಬೆಳಸಿಕೊಂಬ ವಸ್ತುವೆ ಕಾಣದಿರಲಲ್ಲಿ । ಒಳಹೊರಗೆಂಬ ಭೇದವ ತೋರಿಸು ॥ ೨ ॥ ತನನಿದ್ರೆಯೊಳಗು ನೀನೋರ್ವನೆ । ಮನವೆಲ್ಲಿಪೋಗಿ ಕೂಡಿದೊಡಲ್ಲಿಯು ನೀನೆಮನದಿ ತೋರುವ ದೇವರೊಳಗೆಲ್ಲ ॥ ೩ ॥ ನಿನ್ನನಿಜವಕೂಡಿ ಘನವಾನಾದಶಿವ । ಭಿನ್ನ ವೆಂದೊಡೆ ನೋಡು ಮಣ್ಣಾಗುವ । ಭಿನ್ನಾಕಾರವು ತನ್ನಿಂದುದಿಸಿ ತೋರುವ ದದಿ । ನನ್ನದೆಂಬುವನು ಪಾಮರನಾಗುವ ॥ ೪ ॥ ಒಂದೆಮುಂದೆರಡಾಗುವಂಶವ ನರಿಯದ । ವಂದನೆಯಿಂದ ಬಂಧನಪೋಗದು । ತಂದೆಸದ್ಗುರುಶಂಕರಾರ್ಯ ನೊಳ್ಬೆರತೊಡೆ । ಮುಂದೆ ಬಂಧನವು ತನ್ನೊಳು ತೋರದು ॥ ೫ ॥

೫೩

ಗುರುಪಾದದಿಬೆರದು । ನೀನಿರೆ । ಮರಣದಭಯವಿರದು । ಪರಿಪರಿ ವಿಷಯವನರಸುತ ತಿರುಗುವ । ಮರುಳಾಟವನುಳಿದು ॥ ಪಲ್ಲವಿ ॥

ಸಿರಿಬರಗಳು ಪೋಗಿ । ಗುರುವಿನ । ಕರುಣವೆಹಿತವಾಗಿ । ಕರಣದೊ

ಳಿರುವಾವರಣಕೆ ಸಿಲುಕದೆ । ಹೊರಗೊಳಗೊಂದಾಗಿ ॥ ೧ ॥ ಭ್ರಾಂತಿಯುಜಗವ ಳಿದು । ಈಮಲ । ಯಂತ್ರವಕಳೆದುಳಿದು ॥ ಕಾಂತಾಕನಕದ ಚಿಂತೆಯು ಕಳೆದುಪ । ಶಾಂತಿಯುಗುಣಬಲಿದು ॥ ಕುರುಡರನಡೆಬಿಟ್ಟು । ದೃಷ್ಟಿಯು ಪರಮಾರ್ಥದೊಳಿಟ್ಟು । ಕರಣವಬೆಳಗಿಪಗುರುಶಂಕರನಿಗೆ । ಪೆರುತೆಂಬುದ ಸುಟ್ಟು ॥ ೩ ॥

೫೪

ಎಂಥಾಸೋಜಿಗವಾಯಿತಲೆ ಕಾಂತೆ ಎಂಬಂತೆ

ಎಂಥಾಪುರುಷನಿವನೆಲೆಕಾಂತೆ । ಬೇರೆ । ಚಿಂತಿಸುವರಿಗೆ ಕಾಣಿಸನಂತೆ । ಕುಂತಿಹನಂತೆ । ಓಡುವನಂತೆ । ಮುಂದೆ । ನಿಂತವರೊಡನೆಕೂಡುವನಂತೆ । ಅಂತರಂಗಬಲ್ಲವನಂತೆ । ತನ್ನೊ । ಳಂಶವೆಂಬುವೆಕಾಣಿಸದಂತೆ ॥ ಪಲ್ಲವಿ ॥

ನಿಂತುಕೂತಿರುವುದೊಬ್ಬನೊಳಂತೆ । ನೀ । ನೆಂತುನೋಡಿದರಂತಿರುವನಂತೆ ॥ ಭ್ರಾಂತಿಕೂಡಲುಮೂಡಿದನಂತೆ । ತನ । ಗಿಂತಲಧಿಕವಕಾಣಿಸದಂತೆ ॥ ೧ ॥ ಇಲ್ಲೆಯಿದ್ದರುಯಿಲ್ಲದಿರುವನಂತೆ । ತೋರಿ । ಎಲ್ಲೆಲ್ಲು ಬಿಡದೆತುಂಬಿದಂತೆ । ಬೆಲ್ಲದೊಳಿರುವಸಿಹಿಯಿವನಂತೆ । ಇವ । ನಿಲ್ಲದೆರುಚಿಯೆಕಾಣಿಸದಂತೆ ॥ ೨ ॥ ಕರುಣದೊಳಗೆಮರೆತವನಂತೆ । ನಿಂತು । ಮರುಳನಾಗುವುದುಲೀಲೆಗಳಂತೆ ॥ ಗುರುಶಂಕರನೊಳುಭಿನ್ನಿಸಿದಂತೆ । ತನ್ನ । ಭರಣವೆಂಬುವದುಹೊಂದಿಹುದಂತೆ ॥ ೩ ॥

೫೫

ಇನ್ನೆಲ್ಲಿಯುಭವಬಂಧನ ಎಂಬಂತೆ

ಇನ್ನೇತಕೆ ಬಿಡುಚಿಂತೆಯು । ಕೂಡಿ । ತನ್ನಾನಂದಕೆ ತಾನೆ ಜಗವಾದ ಬಳಿಕ । ಮೂಜಗವಾದಬಳಿಕ ॥ ಪಲ್ಲವಿ ॥

ಸುಳಿಗುಳ್ಳೆತೆರೆಯೆಲ್ಲ ಜಲವೆಯಾಗಿರುವಂತೆ । ಬೆಳಗುವೀರೂಪನಾಮಗಳೆಲ್ಲವು । ಥಳಥಳಿಸುವತನ್ನಬೆಳಕಿನಹೊಳಪೆಂದು । ತಿಳಿದು ತಾನಲ್ಲಿ ನಿಶ್ಚಲನಾದಬಳಿಕ ಕಟಕಕುಂಡಲಹಾರ । ಮಕುಟಭಾವಗಳೆಲ್ಲ ಸಟೆಯಾಗಿಪೋಗಲು । ದಿಟವಾಗಿ ತಾನಾತನೆಲೆಗೊಂಡಬಳಿಕ ॥ ತನ್ನಭಾವಿಸುವಲ್ಲಿ ಭಿನ್ನವೆಂಬುವದಿಲ್ಲ ॥ ಭಿನ್ನಕ್ಕೆತನ್ನಸತ್ವವಬಿಟ್ಟರಿಲ್ಲ । ಹನ್ಯವೆಂದೊಡೆ ಜನ್ಮಭಾದೆಪೋಗುವುದಿಲ್ಲ । ಚಿನ್ಮಯನಿದ ಗುರುಶಂಕರನೆಬಲ್ಲ ॥ ೩ ॥

೫೬

ಕೂಡಿದೆಗುರುಪದವ । ನಾನೀ । ಗಾಡಿದೆನೀಫವ ॥ ಮಾಡಿದೆಮನಸಿಗೆ ಪರಮನೊಳ್ಳೈಕ್ಯವ । ನೋಡಿದೆಜನಸುಖವ ॥ ಪಲ್ಲವಿ ॥

ಚಿತ್ತವನೊಳಶಳೆದು । ಸುಖಮಯ । ಚಿತ್ತಭೆಯೊಳುಸುಳಿದು ಚಿತ್ತಿನಪರಿಪೂರ್ಣತ್ವವತಳೆದು । ಸುರೋತ್ತಮನಾಗುಳಿದು ॥ ೧ ॥ ಹೊರ ವೃತ್ತಿಯಬಿಟ್ಟು । ಹೃದಯಾಂ । ತರದೊಳದನಿಟ್ಟು । ಪರಮನಪ್ರಭೆಬೆಳಗುವ ದೃಶ್ಯವ । ಪರವೆಂಬುದಸುಟ್ಟು ॥ ನಾನೇ ಜಗವಾಗಿ । ಜಗವೊಳು ನಾನೇ ನಿಜ ವಾಗಿ ॥ ನಾನೇನನ್ನನು ನೋಡುತಕೂಡುತ । ನೀನೆಂಬುದನೀಗಿ ॥ ೩ ॥ ಬೆಳಕಿಗೆ ಬೆಳಕಾಗಿ । ಮನಸಿನ । ಕಳವಳಗಳುಪೋಗಿ । ಒಳಹೊರಗೆಂಬುವಭಾವಗಳಿಲ್ಲದೆ ಥಳಿಥಳಿಸುವನಾಗಿ ॥ ೪ ॥ ಮರಣವುನಮಗಿಲ್ಲ । ಮುಂದಪ । ಕರಣವು ಬೇಕಿಲ್ಲ ಕರಣವು ಗುರುಶಂಕರನೊಳಡಗಲು । ಎರಡೆಂಬುವದಿಲ್ಲ ॥ ೫ ॥

೫೭

ಸಿಕ್ಕಿದೆಯಾಯೆಲೆಜೀವ ಎಂಬಂತೆ

ಗುರುವೇದೀನರದೆದಿರೆಯೇ । ನಿನ್ನ । ಚರಣಕ್ಕಿಂತಲುಸಿರಿಯೇ । ಪರಿ ಮಿತಿಗಾಣದೆ । ಪರಿಪರಿಯೋನಿಯೋಳ್ । ತಿರುಗುವ ಕೊರತೆಯು । ಪರಿಸಿದ ಪ್ರಭುವೇ ॥ ಪಲ್ಲವಿ ॥

ತಡಿಯೆಕಾಣದುಃಖ । ಕಡಲೊಳ್ಬಿದ್ದಿರೆಮುಕ್ಕ ಒಡಿಯುವಮೂಡುವ । ಒಡಲನಭೇದಿಸಿ । ಒಡೆಯುದಪೊಡಲನು । ತೊಡಿಸಿದಪ್ರಭುವೇ ॥ ೧ ॥ ಭರಣಾಹಾರವಬಿಟ್ಟು । ಗಿರಿತಟದೋಳ್ಶ್ರಮಪಟ್ಟು । ತಿರುಗಿದರ್ಕಾಣದ । ನಿರುಪಮಾನಂದದ । ಸಿರಿಯನುತೋರಿದ । ನರಸುರತರುವೇ ॥ ೨ ॥ ಕರಣವು ನಿನ್ನೊಳುಬೇಗ । ಬೆರೆತಡಗಲ್ಲಾನೀಗ । ಕರಣದಿಕೂಡುವೆ । ವಿರಚಿಸಿನೋಡುವೆ ಹರುಷದಿಗುರುಶಂಕರನಾಗಿರುವೆ ॥ ೩ ॥

೫೮

ಪರಿಪೂರ್ಣಪರಮಹಂಸಾ ಎಂಬಂತೆ

ಶಿವರಾತ್ರಿ ಸಾಂಗವಾಯ್ತು । ಅಲ್ಲಿರುವ । ಶಿವನೊಡನೆಸಂಗವಾಯ್ತು । ಹವನಬಹಿರಂಗವಾಯ್ತು । ಬಾಧಿಸುವ । ಶವದೇಹಭಂಗವಾಯ್ತು ॥ ಪಲ್ಲವಿ ॥

ಉಪವಾಸಿಯಶಾಗಿನಾನು । ಬಿಡಿಸಿತಂ । ದುಪಚಾರಬಿಲ್ವಗಳನು । ಗುಪಿತ ಶಿವಮಂದಿರವನು ಸೇರಿಮಂಟಪದಬಾಗಿಲತೆರೆವೆನು ॥ ೧ ॥ ಸಂಗಿಸದೆಖಂಡದಲ್ಲಿ ಕೂಡಿಬಪಿ । ರಂಗಬ್ರಹ್ಮಾಂಡದಲ್ಲಿ । ಮಂಗಳಾಕಾರದಲ್ಲಿ । ಬೆಳಗುತಿಹಲಿಂಗ ವನು ಕಂಡೆನಲ್ಲಿ ॥ ೨ ॥ ಪಾತಾಳಭುವನಗಳನು । ಗಗನಾಂಡ । ಭೇತಾಳಭೂತಾಳ ಗಳನು । ಭೂತಾದಿಕಾಲಗಳನು । ಬಳಸಿಜಿಜ್ಯೋತಿರೂಪಾಯ್ತುತಾನು ॥ ೩ ॥ ಅಭಯುವೇತೋರುತಿಹುದು । ಎಲ್ಲೆಲ್ಲು ಶುಭಮಹೋದಯವಾದುದು । ಸಭೆಯುಸಂಸರ್ಗವಿರದು । ಅಮೃತದಿಂ । ದಭಿಷೇಕವಾಗುತಿಹುದು ॥ ೪ ॥ ಘಂಟೆಯುಸು ಬಡಿಯಲಿಲ್ಲ । ಆದುಬಪಳ ಕಂಟಕವೆ । ತೋರಿತಲ್ಲ । ಕುಂಟರೀ ನೆಂಟರೆಲ್ಲ । ದೀಪಗಳನಂಟಿಸುವನಾನಿಲ್ಲ ॥ ೫ ॥ ಗಾತ್ರವೇಕಾಣಲಿಲ್ಲ । ವದರಿಂದ ಪಾತ್ರೆಗಳನಿರಿಸಲಿಲ್ಲ । ಪಾತ್ರೆಗವಕಾಶವಿಲ್ಲ ಶಿವನಬಳಿ । ರಾತ್ರಿಯೇ ತೋರಲಿಲ್ಲ ॥ ೬ ॥ ಭೇದವಲ್ಲಿಲ್ಲವಾಯ್ತು । ಮಂತ್ರಪಠನಾದಿಗಳು ಬೇಡವಾಯ್ತು । ಪಾದವೇ ಭವನವಾಯ್ತು । ಅದರಿಂದ ಪಾದವೇಶೂನ್ಯವಾಯ್ತು ॥ ೭ ॥ ಪಂಚ ಪಾತ್ರೆಗಳತೊಳದೆ । ಆಗಾಮಿ । ಸಂಚಿತಂಗಳು ತಳೆದೆ । ಪಂಚಾಮೃತವನು ಸವಿದೆ । ಹರಿಹರಪಿ । ರಿಂಚಿರೂಪವನುತಳೆದೆ ॥ ೮ ॥ ಮರಣಜನ್ಮಂಗಳಿಲ್ಲ ಮುಂದದರ । ಭರಣದುಃಖಗಳಿಲ್ಲ । ಬರುವ ತಾಪಂಗಳಿಲ್ಲ । ಇದನು ಸದ್ಗುರುಶಂಕರಾರ್ಯಬಲ್ಲ ॥

೫೯

ಗಂಧಮುಪೂಯರುಗಾ ಎಂಬಂತೆ

ಲಿಂಗವನೋಡಮ್ಮ । ತನುವಿನ । ಸಂಗವುಬೇಡಮ್ಮ । ಭಂಗಪಡುವ ವಿವಿದಾಂಗದೊಳಿದ್ದರು । ರಂಗುಕೆಡದಬಹುಮಂಗಳಕರನೆಶಿವ ॥ ಪಲ್ಲವಿ ॥

ಕಂಗಳನೊಡಗೂಡಿ । ಬಗೆಬಗೆ । ರಂಗಾಗುತಮೂಡಿ । ಅಂಗದೊಳಗು ಬಹಿ । ರಂಗದೊಳಗು ಬೆಳ । ದಿಂಗಳಪೋಲ್‌ಭುವನಂಗಳಬೆಳಗಿಪ ॥ ೧ ॥ ಖಂಡವೆನಿಸುತಿಲ್ಲಿ ಈಮಲ । ಭಾಂಡದಒಡಲಲ್ಲೆ । ಪಿಂಡವಳಿಯುಗಗನಾಂಡದ ಪರಿಯೇ । ಕಾಂಡವೆನಿಸಿ ಬ್ರಹ್ಮಾಂಡವಬೆಳಗುವ ॥ ೨ ॥ ಸಡಗರದೊಳಗಿಹುದು ಇದುಬಹು । ಒಡಲೊಳಗಡಗಿಹುದು । ಎಡಬಲದೊಡಲಿನಬುಡವನುಕಡಿ ದೊಡೆ । ಪೊಡವಿಯುಕೋಟೆಗೆಡೆಯಾಗುವ ಘನಲಿಂಗವ ॥೩॥ ತನುವಿನೊಳಗೆ ಮೂಡಿ । ಚಲಿಸುವ । ಮನಸಿನೊಡನೆಕೂಡಿ । ಕನಕಧನಾಂಗನೆ ಮನೆಗಳ

ರೂಪದಿ ಜನಿಸುತತೋರುವ ಜಗವಾಗಿರುವವೀಲಿಂಗವ ॥ ೫ ॥ ಎರಡೆಂಬುದ ಪಿಡಿದು । ಬರಿದೆ ಸೆರೆಯೊಳಗಡಗಿಹುದು । ಕರಣವು ಗುರುಶಂಕರನೊಳು ಬೆರೆತರೆ । ತೆರೆಕೊರೆಯಿಲ್ಲದೆ ನಿರವಧಿಯೆನಿಸುವಲಿಂಗವ ॥ ೫ ॥

೬೦

ಏನನಾಡಿದೆ ದೀನಮುನಿಯೆ ಎಂಬಂತೆ

ನೀಡುವಜೇನಿನ್ನಘನವಕೂಡಿನಿಜದೊಳು । ಮೂಢನಾಗಿ ಭ್ರಮಿಸಿ ಬೀಳಬೇಡಭವದೊಳು ॥ ಪಲ್ಲವಿ ॥

ಭಿನ್ನವೆಂಬುದುದಿಸಿ ಬೆಳಗುವಂದವರಿಯದೆ । ಜನ್ಮಮರಣಬಾಧೆಯಿಂದ ನೊಂದುತಿರುಗದೆ ॥ ೧ ॥ ತನುವೆತಾನುಹುನಲುತನಗೆಮರಣತೊಡಗಿದೆ । ಜನಿಸಿ ದಾತನಲ್ಲವಾಗೆ ಧರಣಿನಡುಗದೇ ॥ ೨ ॥ ನೆನಸಿದಾಗ ಬರುವದೇಪರಿರುವ ಠಾವಿನೋಳ್ । ಮನವನಿಲ್ಲಿಸಿದೊಡೆ । ಕಳೆದವಖಿಳದುಃಖಗಳ್ ॥ ೩ ॥ ಸೃಷ್ಟಿಗೆಲ್ಲ ಬೀಜತನ್ನ ದೃಷ್ಟಿಯಾಗವೆ । ಹುಟ್ಟಿಕೆಡುವಕಷ್ಟ ತನ್ನಬಿಟ್ಟು ಪೋಪುದೇ ॥ ೪ ॥ ಜ್ಞಾನವಿರಲು ಮರವೆಯಿಂದ ಮರಣವಾಗದು ॥ ಕಾಣ ದಿರುವ ದೈವದಿಂ ವದುರಿತಪೋಗದು ॥ ೫ ॥ ಶಿವನು ತನ್ನ ಭಾವಬಿಡದಬಗೆಯ ನರಿತೆ । ಅವನ ಮುಂದೆ ಲೋಕನಾಥರೆಲ್ಲ ತಿರುಕರೆ ॥ ೬ ॥ ಶಂಕರಾರ್ಯನಂಘ್ರಿ ಗಳಲಿ ತನುವ ಸೇರಿಸು । ಶಂಕೆಯೆಂಬ ಕಾಡಿನಿಂದ ಮನವದಾಟಿಸು ॥ ೭ ॥

೬೧

ಕುದುರೆಯೇರಿದಯೋಗಿಸಿಪಾಯಿ ಎಂಬಂತೆ

ನೀನಾರೊನೋಡು ನೋಡಲೊಜೀವ । ನೀನಾಗದೇವ ನೀನಿರದಿರೆ ಹೆಣವೆನಿಸುತಭಿನ್ನಿಸಿ । ಕಾಣುವ ಈ ಮಲಕಾಯುವಕಳೆದು ॥ ಪಲ್ಲವಿ ॥

ಮಲಮಾಂಸಾಸ್ಥಿಗಳೊಂದೆಡೆಯೊಳುಮೂಡಿ । ಆಕಾರವಿಲ್ಲದ । ಕುಲ ಜಾತಿವೃತಸೂತಕದಿಂಕೂಡಿ । ಒಳಹೊರಗೆಲ್ಲಿಯುಮಲಮಯವೆನಿಸುತ । ಚಲಿ ಸಲುತನುಧರ್ಮವನೀಗಾಡಿ ॥ ೧ ॥ ಹೆಣ್ಣುಗಂಡುಗಳೆಂಬುವಭಾವಗಳು । ನಾನಾ ವಿಚಿತ್ರದ । ಬಣ್ಣಾಕಾರದಿಕೂಡಿದಕವಲುಗಳು । ಬಣ್ಣಿಸಿಕೊಂಬುವ ಬಗೆಬಗೆ ಕಳೆಗಳು ಮಣ್ಣಾಗುವದಿಪ್ಪುನೀನಿರದಿರಲು ॥ ೨ ॥ ಇದರೋಳ್ ನಿಲ್ಲುವನಿಜ ಕಳೆಯೊಂದಿಲ್ಲ ಮತ್ತೀ ಶರೀರವು ಮೊದಲಿಲ್ಲ । ಮಣ್ಣೆನಿಸಿದ ಮೇಲಿಲ್ಲ । ಮೊದಲಿರದೆ ನೀನಿಂದುಬರಲಿಲ್ಲ । ಒದಗಿತುಮರವೆಯೊಳಿದುನೀನಲ್ಲ ।

॥ ಹೃದಯಾಕಾಸದಮಧ್ಯದಿಗುರಿಯಿಟ್ಟು ॥ ಪರಿಪೂರ್ಣನಾಗುತ ॥ ಇದ ಮಾಕಾರದಬೇದವನೀಬಿಟ್ಟು । ವಿಧವಿಧರೂಪವಧರಿಸುವಚಿತ್ತವ । ಸದಮಲ ಗುರುಶಂಕರನೊಳಗಿಟ್ಟು ॥ ೪ ॥

೬೨

ಒಂದೇನಾಮದೊಳಡಗಿದವು ಎಂಬಂತೆ

ನೋಡುನೋಡೀಗಲೇಜೀವ । ನಿನ್ನನಿಜವ । ಮುಂದೆಮೂಢನಾಗಿ ರಲುಹೊಂದುವೆ ನೀಚತನವಾ ॥ ಪಲ್ಲವಿ ॥ ಮರಣವಾಗುವ ದೇಹದಲ್ಲಿ । ಸುಖವೆಲ್ಲಿ । ಮೃತ್ಯು । ಹರನಾಗಿಬಾಳುವಸುಖಮೋಕ್ಷದಲ್ಲಿ ॥ ೧ ॥ ಕೊರತೆ ತೋರಲು ಭೋಗವೆಲ್ಲ । ಹರ್ಷವಿಲ್ಲ । ದುಃಖಬೆರೆಯದಾನಂದ ಮೋಕ್ಷವ ಬಿಟ್ಟರಿಲ್ಲ ॥ ೨ ॥ ಸ್ಥಿರವಿಲ್ಲದಿರುವಸಂಸಾರ । ನಿಸ್ಸಾರ । ತಾನು । ಹರನಂತೆ ವಿಹರಿಸುವುದೆ ಮೋಕ್ಷಸಾರ ॥ ೩ ॥ ಶಿರಭಾಗಿಸುವನೆಂತುಭೋಗಿ । ಜನ್ಮ ರೋಗಿ । ನಮ್ಮಗುರುಶಂಕರಕೂಡಿದವ ರಾಜಯೋಗಿ ॥ ೪ ॥

೬೩

ನರನೋ । ಶ್ವಾ । ನರನೋ । ಪಾಮರನಿವ ಭರಣವಹರಿಸುವ ಮರಣ ಭೀತಿಯುಪೊತ್ತು ತರುಣಿಸತರತಬ್ಬಿ । ಮರುಳನಾಗಿರುವಾತ ॥ ಪ ॥

ಮಡದಿಮಕ್ಕಳು ಮನೆ । ಒಡವೆವಸ್ತ್ರಗಳಿಂದ । ದೃಢವಾದೀಸುಖದೊಳು । ನಡುಗುತ್ತಬಾಳುವ ॥ ೧ ॥ ಸಿರಿತನವನು ದೊಡ್ಡ । ದೊರೆತನವನು ಕೂಡಿ । ಮರಣದ ಭಯವಂತಃ । ಕರಣದೊಳಿರುವಾತ ॥ ೨ ॥ ಹಣವಂತ ಬಹುದೊಡ್ಡ ಘನವಂತನಾಗುತ । ಹೆಣದ ಸುದ್ಧಿಯಕೇಳಿ । ತನುವ ತಗ್ಗಿಸುವಾತ ॥ ೩ ॥ ನರನುತಾನದರೊಳು । ಪುರುಷನೆಂದಾಡುತ । ಗುರುಶಂಕರನಬಿಟ್ಟು । ನರಕ ದೋಳ್ ಬೀಳುವಾತ ॥ ೪ ॥

೬೪

ಗುರುಪಾದದೊಳುಮನವಿಂಗಿ ಎಂಬಂತೆ

ನರನೆಂದು ತನ್ನ ಪೇಳುವನು । ನೋಡೆ । ಕುರಿಯಂತೆ ತಾನು ಸಾಯುವನು ॥ ಅರುಹಿನಿಂಹರನಾಗಿ । ಮರಣವಹರಿಸದೆ । ನರಜನ್ಮವನು ನೀಗಿ । ನರಕಕ್ಕೆ ಗುರಿಯಾಗಿ ॥ ಪಲ್ಲವಿ ॥

ಧೀರನಾನೆಂದು ತಿರುಗುವನು । ಬಂತು । ಮಾರಿನೋಡೆನಲು ಕೊರಗುವನು ॥ ಈರೇಳುಲೋಕವ । ಮಿಾರಿತಾನಿಲ್ಲದೆ । ಘೋರಮೃತ್ಯುವಿಗೆ ಈ । ಸಾರದೇಹವಕೊಟ್ಟು ॥ ೧ ॥ ಜಾಣನೆನ್ನುತಕೊಬ್ಬಿಮೆರೆವ । ಹೆಣವ ಕಾಣುತ್ತ ಮಲವನ್ನೆಬಿಡುವ ॥ ಜ್ಞಾನದಿಂಹರನಾಗಿ । ಹಾನಿಯುಂಹರಿಸದೆ । ನಾನಾದುಃಖಗಳಿಂದ ಪ್ರಾಣವಕಳೆಯುತ್ತ ॥ ೨ ॥ ಹುರಿಮಾಡುತ್ತಿರುವರೋ ಮಗಳ । ಮತ್ತೊ । ಬ್ಬರಿಗೆಜೋಡಿಸುವಹಸ್ತಗಳ ॥ ಗುರುಶಂಕರನಕೂಡಿ । ಮರಣವಹರಿಸದೆ । ಮರವೆಯಿಂಕುರಿನಾಯಿ । ನರಿಯಾಗಿಪುಟ್ಟುತ್ತ ॥ ೩ ॥

೬೫

ಜ್ಞಾನವಿಲ್ಲದಮೂಢ । ಕಾಣುವಬಗೆಯೆಂತು ದೈವವನ್ನು । ಧ್ಯಾನ ಮಾಡುತಕೂಡಿ—ನಾನಾತತ್ವದೊಳುತನ್ನ । ಭಾವವನ್ನು ॥ ಪಲ್ಲವಿ ॥

ದೇಹಾಭಿಮಾನಿಯು । ಸೋಹಂಯೆಂದೊಡೆಶಿವನಾಗಲಾರ । ದೇಹ ಮೋಹಬಿಟ್ಟು ಸಾಹಸಿ ವಿಷಯಕ್ಕೆಬಾಗಲಾರ ॥ ೧ ॥ ನರನಂತೆ ಬಳಲುತ್ತ ಪರತಾನೆಂದವ—ದೈತ್ಯನಾದ । ಮರವೆತೋರದೆ ಜಗದ್ಭರಿತನಾದವಕೃತ ಕೃತ್ಯನಾದ ॥ ೨ ॥ ನಂದುಯೆಂಬಭಿಮಾನ । ಮುಂದೆನಿಂದಿರುವಲ್ಲಿ—ಮೋಕ್ಷ ವಿಲ್ಲ । ನಿಂದಿಲ್ಲದೆಲ್ಲ ತನ್ನಾನಂದವಾದಲ್ಲಿ ಸಾಕ್ಷಿಯಿಲ್ಲ ॥ ೩ ॥ ಕಾಣುವೀಜಗವು ತನ್ನಾನಂದವಾದಲ್ಲಿ—ಲಿಂಗವಾದ । ಧ್ಯಾನದೋಳ್ ವಿಷಯಾಭಿಮಾನವು ನಿಂದಲ್ಲಿ—ಭಂಗವಾದ ॥ ೪ ॥ ತನುಮನೋರೂಪೆಲ್ಲ ಚಿನುಮಯವಾದರೆ ಶಿಷ್ಟನಾದ । ಮನದೊಳು ವಿಷಯದ ಮನನವೇರಿದ್ದರೆ ಭ್ರಷ್ಟನಾದ ॥ ೫ ॥ ಮರವೆಸುಪ್ತಿಯುಂಪೋಗಿ ಪರನುನಾನೆಂದೊಡೆ—ಸತ್ಯವಾಯ್ತು ॥ ಬೆರತು ॥ ದುಃಖದಲಿ ನಾ ಪರಮಾತ್ಮನೆನೆ ಬ್ರಹ್ಮ—ಹತ್ಯವಾಯ್ತು ॥ ೬ ॥ ಪರಮಾತ್ಮನೊಳು ಮನಬೆರತವಿಷಯವ ಕೂಡಲಾರ । ಗುರುಶಂಕರಾರ್ಯನೋಳ್ ಬೆರೆಯದಾತನು ತನ್ನ ನೋಡಲಾರ ॥ ೭ ॥

೬೬

ಲಿಂಗಪೂಜೆಯಮಾಡಿರೋ ಎಂಬಂತೆ

ಶವನುನಾನೆನಬಹುದೆ ಪಾಮರನಿವ । ಶಿವನುನಾನೆನಬಹುದೇ । ಶವ ಶರೀರವಿಷಯಸುಖವನು । ಭವದೊಳಗೆತಾನಿಟ್ಟುಬಳಲುತ । ಶಿವನೊಳಂಗವ ನೋಡದಮಾತದೆ । ಭವಿಯೆನಿಸಿ ದುಃಖಿಸುವಜೀವನು ॥ ಪಲ್ಲವಿ ॥

ಸೋಹಂಭಾವವುನಿಲ್ಲದೇ । ಇಂದ್ರಿಯಭೋಗ । ಮೋಹಂಗಳನು ಕೊಲ್ಲದೇ । ತಾನೆಂಬಮೂ । ಲಾಹಂಕಾರವತಳ್ಳದೆ । ಪರಿಪೂರ್ಣನಾಗದೆ ಸಾಹಸವನೆಲ್ಲವನು ಕೊಳೆಯುವ । ದೇಹಭೋಗದೊಳಿಟ್ಟು ಪುಸ್ತುಕ। ದೂಹೆಯಿಂಬ್ರಹ್ಮನಲಿ ತೂಗುತ । ದೇಹಿತಾನಾಗಿರುವ ಜೀವನು ॥ ೧ ॥ ಏಕಾರವುತೋರದೆ । ಲೋಕಗಳು ತ । ನ್ನೇಕಾಂಶದೊಳಸೇರದೆ । ಮಧ್ಯದೊಳಿರುವ । ಲೋಕಾಧಾರನಮೀರದೆ । ನಿರ್ದುಃಖನಾಗದೆ । ಬೇಕು ಯೆನಿಸುವ ವಿಷಯಭೋಗವ । ಸಾಕುಮಾಡದೆ ಮುಳುಗಿವಿಷಯದೊ । ಳೇಕ ಮೇವೈಯೆನುತಬಾಯೊಳು । ಶೋಕದಲಿ ಬಿದ್ದಿರುವ ಜೀವನು ॥ ೨ ॥ ಹೊರ ಗೊಳಗೊಂದಾಗದೆ । ಮುಂದಿಹದೃಶ್ಯ । ಪರವೆಂಬ ಭ್ರಮೆಪೋಗದೆ । ಕಾಣು ವುದುತನ್ನರುಹಿನಬೆಳಕಾಗದೆ । ಪರಮಾತ್ಮನಾಗದೆ । ಪರಿಪರಿಯ ತಾಪತ್ರ ಯಾಗ್ನಿಯೊ। ಳುರುಳಿಹೊರಳಾಡುತ್ತ ನುಡಿಯೊಳ । ಗಿರುವಶಿವನೊಳು ಶಿರವ ತೂಗುತ । ಮರೆತು ಗುರುಶಂಕರನಜೀವನು ॥ ೩ ॥

೬೭

ಎಲ್ಲಿಹನೆಂದುಪೂಜಿಸಲಿ ಎಂಬಂತೆ

ಕೆಡಬೇಡನರನಾಗಿಜೀವ । ನಿನ್ನೊಡಲಕಂಡರೆ ನೀನೆದೇವ ॥ ಮಡದಿ ಮಕ್ಕಳು ಎಂದು । ಒಡಲಮೋಹದಿನಿಂದು । ಪಿಡಿಯೆ ಕಾಲನು ಬಂದು । ಕಡೆಗೆಧರೆಯೊಳುಬೆಂದು ॥ ಪಲ್ಲವಿ ॥

ಮನಮುಟ್ಟಿಧರ್ಮದೊಳುಕೂಡಿ । ನೀ ಘನವಾದ ಪುಣ್ಯಗಳಮಾಡಿ । ಮನಮಂತ್ರಗಳಪಾಡಿ । ಎಣಿಸಿನಿಯಮದಿಬಾಡಿ । ತನುಬಿಡಲ್ಪ್ರೇತತಾ । ನೆನಿಪಕರ್ಮವಮಾಡಿ ॥ ೧ ॥ ಮಡಿಯಾಗಿ ಭಕ್ತಿಯಿಂದಕೂಡಿ । ನೀ । ಹುಡುಕಿ ದೇವರನೆಲ್ಲ ನೋಡಿ ॥ ಮೃಡನಪೂಜೆಯುಮಾಡಿ । ಬಿಡದೆಮುಕ್ತಿಯಬೇಡಿ ॥ ಕಡೆಗೆನರಕದಹಾದಿ ॥ ಗಿಡುವಕರ್ಮದೊಳಾಡಿ ॥ ೨ ॥ ಶಿರಬಾಗಿಸಿದಪುಣ್ಯವೆಷ್ಟು । ನೀ । ಪರಕೆಂದುಮಾಡಿದ್ದವಷ್ಟು । ಮರಣವಾಗಲುಕೆಟ್ಟು । ದುರಿತಕೆ ಒಳಪಟ್ಟು । ನರಕಮಾರ್ಗವತೊಟ್ಟು । ಗುರುಶಂಕರನಬಿಟ್ಟು ॥ ೩ ॥

೬೮

ಭಕ್ತಿಯುನಿಲಬೇಕು । ಅದುನಿಜ । ಮುಕ್ತಿಯಕೊಡಬೇಕು ॥ ಯುಕ್ತಿ ಗೋಚರವಾಗದಸೃಷ್ಟಿಯು ॥ ಶಕ್ತಿಯತನ್ನೊಳು ತೋರಿದಗುರುಪದ ॥ ಪ ॥

ಶಾಶ್ವತನಂಮಾಡಿ ತನ್ನೊಳ । ಗೀಶ್ವರನಂಕೂಡಿ ॥ ದೃಶ್ಯವುದೃಕ್ಕಿನೊಳಡಗಲುಸಿಲ್ಲುವ । ವಿಶ್ವಧಾರನತೋರಿದಗುರುಪದ ॥ ೧ ॥ ಸಂದೇಹವ ಕೆಡಿಸಿ । ತೊಡಪಿದ ಬಂಧನವನುಬಿಡಿಸಿ । ಸಂದಿಲ್ಲದಚಿದ್ಬಯಲೊಳು ಸಹಜಾನಂದವತೋರಿದ ಸದ್ಗುರುವಿನಪದ ॥ ೧ ॥ ಚಿನ್ಮಯನೀನೆಂದುತೋರಿಸಿ । ಜನ್ಮಗಳನುಕೊಂದು । ಭಿನ್ನಿಸಿಕಾಣುವಜಗದವಿಚಿತ್ರವ । ತನ್ನಾನಂದವ ಮಾಡಿದಗುರುಪದ ॥ ೩ ॥ ತತ್ವಗಳನುವಿಾರಿ ॥ ನಾನಿಹ । ತತ್ವಾರ್ಥತೋರಿ । ಮರ್ತ್ಯನಮರಣದ ಮೋಹವತೊಲಗಿಸಿ । ಮೃತ್ಯು । ಜಯನಂಮಾಡಿದ ಗುರುಪದ ॥ ೪ ॥ ಸಾಕಾರವತೊಟ್ಟು । ಬೆಳಗುವ । ಲೋಕವನೊಳಗಿಟ್ಟು । ಲೋಕಾಲೋಕಜಗತ್ತುಗಳನು ತ । ನ್ನೇಕಾಂಶದಿ ತೋರಿಸಿದಮಹಾಗುರು ॥ ೫ ॥ ತಿಳಿದೊಡೆಒಂದಾಗಿ । ಮರತರೆ । ಒಳಹೊರಸಂದಾಗಿ ಬೆಳಗುತನಾನಾ ಬ್ರಹ್ಮಾಂಡಗಳನು । ಬಳಸಿಪರಮಾತ್ಮನ ತೋರಿದಗುರು ॥ ೬ ॥ ಶಂಕೆಗಳನು ತೊಳೆದು । ಸಾಯುವ । ಸಂಕೋಲೆಯ ಕಳೆದು । ಸಂಕಟಬರುವಾತಂಕವ ಹರಿಸುವ । ಶಂಕರಗುರುಪದಕಿಂಕರನಾಗುವ ॥ ೭ ॥

೬೯

ಬೇವುಬೆಲ್ಲದೊಡಳಿರಲೇನುಫಲ ಎಂಬಂತೆ

ಎಂದಿಗೆದುಃಖವಕೂಡದೆ ಬಾಳುವೆ । ಬಂಧನದಲಿಬಾಡುವ ಮನವೇ ॥ ಕುಂದದೆ ನಿನ್ನೊಳುಬೆಳಗುವ ಸಹಜಾ । ನಂದವಕಾಣದೆನೀಕೆಡುವೆ ॥ ಪಲ್ಲವಿ ॥

ಬೆಳಗಾಯಿತುಯೆನೆ ॥ ಕಳೆಯುನುಕಳೆಯುತ । ಬೆಳೆಯುವತನುಬಿಳದುಳದೀತೆ । ಒಳಗಿರುವನುಬಿಡಲಿದುಹೆಣವೆನ್ನುತ । ಬಳಗವುಹತ್ತರಸುಳದೀತೆ ॥ ೧ ॥ ಸರಿಯೆನಿಸುವತೆರನಿರಬೇಕೆನ್ನುತ । ಪರಿಪರಿಬಳಗವಪೊರೆತ್ತಿರುವೆ । ಮರಣದಭಯಬಂದಿದರೋಳ್ ಬೆರೆತರೆ । ಕೊರಗುತನೀಹೊರಳುತ್ತಿರುವೆ ॥ ೨ ॥ ತರಳರುಸಹಿತರೆನ್ನವರೆನ್ನುತ । ಬೆರೆತಿವರೊಳುಮರವೆಯೊಳಿರುವೆ । ಬೆರತರೆ ಗುರುಶಂಕರನೊಳುಚಲಿಸದೆ । ಹರಿಸುವೆ ಮೃತ್ಯುವಿಾರಿರುವೆ ॥

೭೦

ಆನಂದವಾನಂದವಾಯಿತು ಎಂಬಂತೆ

ನೋಡಮ್ಮ ನೋಡುಪರಮಾತ್ಮನ । ಕೂಡಿನೋಡಮ್ಮ ॥ ಪಲ್ಲವಿ ॥ ನೋಡುವದೃಷ್ಟಿಯೆಲ್ಲಿಂದಾದುದು । ಇದುಕೂಡಿದಲ್ಲೆಲ್ಲ ಬೆಳಕಾಗುವುದು ।

ಮುಂದೆ । ನಾಡಾಗುವಲ್ಲಿಸತ್ವವಾರದು । ಇದು । ಮೂಡುವಮೂಲದೊಳು ಮನವೇಕವಾಗಿಬೆರದು ॥ ಪಲ್ಲವಿ ॥

ತನುವೆತಾನೆಂಬಭಾವಪೋದರೆ । ಕೆಡುವ । ವನಿತಾದಿವಸ್ತುಬೇಡವಾದರೆ ॥ ಮುಂದೆ । ಮನದಲ್ಲಿಸತ್ವನೆಲೆಯಾದರೆ । ತನ್ನ । ತನುವಿಂದೆಳೆಯುವಮೃತ್ಯುವೆಂಬುವನಾರೆ ॥ ೧ ॥ ತಾನೆಂಬವಸ್ತುದೇಹವಾಗದು । ಮುಂದೆತಾನಿಲ್ಲದಿರೆ ದೇಹತೋರದು । ಭಿನ್ನ । ಧ್ಯಾನಕ್ಕಾಕಾರದಲ್ಲಿಸೇರದು । ಸತ್ಯಜ್ಞಾನಾನಂದವೆಯಾಗಿ । ಪರಿಪೂರ್ಣವಾಗಿಹುದು ॥ ೨ ॥ ಮರಣಾದಿಬಂಧದೊಳುಸೇರದೆ । ದೇಹಪರಿತಾಪದಿಂದತಾನುತೋರದೆ । ತನ್ನ । ಪರಿಪೂರ್ಣಭಾವವಮೀರದೆ ॥ ನಮ್ಮ ಗುರುಶಂಕರನಕೂಡಿದವರೋಳ್ ತಾನಾಡುತಿದೆ ॥೩॥

೭೧

ಜ್ಯೋತಿಬೆಳಗುತಿದೆ । ನಿತ್ಯಾನಂದ । ಜ್ಯೋತಿಬೆಳಗುತಿದೆ ॥ ಭೂತಾದಿ ತೈಜಸವೈಕಾರಿಕದೊಳು । ಸಂ । ಜಾತವಾಗಿಹ ಪಿಂಡಬ್ರಹ್ಮಾಂಡವನುಮೀರಿ ॥ ಜ್ಯೋತಿಬೆಳಗುತಿದೆ ॥ ೧ ॥ ಪಲ್ಲವಿ ॥

ತರಣಿಚಂದ್ರಾನಲತಾರೆಮಿಂಚುಗಳೆಂಬ । ಪರಿಪರಿಬೆಳಕಿನ ಬಳಗವನೊಳಗೊಂಡು । ಜ್ಯೋತಿಬೆಳಗುತಿದೆ ॥ ೧ ॥ ರಂಗುಗೆಡದೆಮಲಸಂಗವಿಲ್ಲದೆ ವಿವಿ । ಧಾಂಗದೊಳಾಡುವ ಮಂಗಳಾತ್ಮಕಪೂರ್ಣ । ಜ್ಯೋತಿಬೆಳಗುತಿದೆ ॥ ೨ ॥ ಅಂಕೆಗೆಸಿಲುಕದಸಂಕರವೆನಿಸಿದ । ಶಂಕರಗುರುವೆಂಬಾಂ । ತಂಕವಿಲ್ಲದ ಪರಂಜ್ಯೋತಿಬೆಳಗುತಿದೆ ॥ ೩ ॥

೭೨

ಸುಡಬೇಕು ಬಿಡದೆಸುಡಬೇಕು । ಕಡೆಗಾಣದಿಹಕರ್ಮದೊಡಲ ಪಾಮರರನ್ನು ॥ ಪಲ್ಲವಿ ॥

ಕೆಡದಂತೆ ದೇವರನ್ನೊಡಲಲ್ಲಿ ತಡೆಯುದೆ । ಮಡಿಯೆಂದುಹೆಜ್ಜೆಯನ್ನಿಡುತ ಹಾರುವರನ್ನು ॥ ೧ ॥ ಮನದಲ್ಲಿಬೆಳಗುವ ಚಿನುಮಯನ್ನರಿಯದೆ । ತನುಸೂತಕವತೊಟ್ಟು ಜನಿಸಿಸಾಯುವರನ್ನು ॥ ೨ ॥ ಭಾವರೂಪಿನ ಮಹಾದೇವನೋಳ್‌ಬೆರೆಯದೆ । ದೇವರಿಗುಮಡಿಯೆಂದುಭಾವಿಗೆಳೆಯುವರನ್ನು ॥ ೩ ॥ ಸರನಾಗಿಶಂಕರಗುರುವಿನೋಳ್‌ಬೆರೆಯದೆ । ಮರಣವಾಗುತ ತಾವು ಮರಳಿಪುಟ್ಟುವರನ್ನು ॥ ೪ ॥

೭೩

ಎಂಥಾದ್ದೀಕಲಿಕಾಲವು । ದುರ್ಗತಿಗೆಳೆಯುವಂಥಾದ್ದೆ ಬಹುಮೋಳವು । ಅಂತರಂಗದೊಳು ಶಿವಶಾಂತಿಯುಂಪಡೆಯುದ । ಭ್ರಾಂತರೆಲ್ಲರು ಪೂಜ್ಯರಂತೆ ಭೂಸುರರಂತೆ ॥ ಪಲ್ಲವಿ ॥

ಹರನಮಾಡದೆಗ್ರಾತ್ರವ । ಮೋಹಿಗಳಾಗಿ । ಧರಿಸಿಪಾತಕಸೂತ್ರವ । ಮರಣಜನ್ಮಗಳಲ್ಲಿಬೆರೆತುಸೂತಕದಲ್ಲಿ । ಮರಳಿವೈತರಣಿಯಲ್ಲಿರುವರೇ ದ್ವಿಜರಲ್ಲಿ ॥ ೧ ॥ ಭಿನ್ನಾಕಾರವತಳ್ಳದೆ । ದೇವರುಬಂದು । ತನ್ನಂಗದೊಳು ನಿಲ್ಲದೆ । ಬೆನ್ನಂಟಿರುವ ಶಿವನನ್ನು ತಾಬೆರೆಯುದ । ಜನ್ಮಕರ್ಮಿಗಳೆಲ್ಲ ಮಾನ್ಯರಾದವರಂತೆ ॥ ೨ ॥ ದೃಢವಾದಮಡಿಸಿಲ್ಲದೆ । ಶಂಕರದೇವನಡಿಯಲ್ಲಿಶಿರಬಾಗದೆ । ಒಡಲಸೂತಕದಿಂದ ॥ ಬಿಡದಪಾತಕದಿಂದ ॥ ಕೆಡುವಪಾಪಿಗಳೆಲ್ಲ ಮಡಿಯುಮಾನವರಂತೆ ॥ ೩ ॥

೭೪

ತೂರಿಬಾರೋಪ್ರೋಗಿತೂರಿಬಾರಣ್ಣ ॥ ಪಲ್ಲವಿ ॥ ತೋರುವೀಜಗವೆಲ್ಲ । ಶಿವನಾಕಾರವೆಂಬಜ್ಞಾನವೀರ ॥ ಅನುಪಲ್ಲವಿ ॥

ಮೂರುಗುಣಗಳುಕೂಡಿಮಾಡುವ । ಮೂರುದೇಹಗಳಲ್ಲಿ ಬೆಳಗುವ ॥ ಮೂರುಲಿಂಗಗಳಲ್ಲಿ ಬೆರೆಯದೆ ಹಾರುವರು ತಾವೆಂಬಭವಿಗಳ ॥ ತೂರಿ ॥ ೧ ॥ ಸೃಷ್ಟಿಕೋಟಿಯೊಳಿರುವ ದೇವರನಷ್ಟು ತನ್ನಂಗದಲಿ ಬೇಗಿಸು । ವಿಷ್ಣು ಲಿಂಗವ ಬಿಟ್ಟು ಬರಿದ । ಶ್ರೇಷ್ಠರೆಂಬೀಭ್ರಷ್ಟಭವಿಗಳ ॥ ೨ ॥ ತಾನುತನುವಲ್ಲವೆಂಬ ಸಮ್ಯಕ್ ಜ್ಞಾನರೂಪಪ್ರಾಣಲಿಂಗ । ಧ್ಯಾನವಿಲ್ಲದೆ ಪೂಜ್ಯರೆಂಬುವ। ಮಾನವಾಧಮರಾದಭವಿಗಳ ॥ ೩ ॥ ಭಾವನೆಯೊಳುಂಟಾದ ಜಗವನು । ಭಾವದೊಳು ಲಯಪಡಿಸಿಬೆಳಗುವ । ಭಾವಲಿಂಗದೊಳೈಕ್ಯವಾಗದೆ ಭಾವಿಯೊಳು ಮುಳುಗಿರುವ ಭವಿಗಳ ॥ ೪ ॥ ಎಷ್ಟುಕರ್ಮಗಳನ್ನು ಮಾಡಿದ । ಎಷ್ಟು ನಿಯಮದಿಮಾಡಿದರು ತನು । ಬಿಟ್ಟರೆತಾವ್ ಪ್ರೇತರಾಗುವ । ನಷ್ಟಸೂತಕ ದುಷ್ಟಭವಿಗಳ ॥ ೫ ॥ ಹುಟ್ಟುಸೂತಕದಿಂದದೇಹದ । ನಷ್ಟಸೂತಕದಿಂದ ಮಧ್ಯದ । ಮುಟ್ಟುಸೂತಕದಿಂದಕೆಟ್ಟು ನಿ । ಕೃಷ್ಟರಾಗಿಹ ದುಷ್ಟಭವಿಗಳ ॥ ೬ ॥ ವೇದಗಳನೋದಿದರು । ಘಂಟಾನಾದಗಳ ಮಾಡಿದರು ಪುಣ್ಯವ ।

ಸಾಧಿಸಿದರುಕಡೆತುದಿಗೆ ನರಕದ । ಹಾದಿಗಿಳಿಯುವ। ಕರ್ಮಭವಿಗಳ ॥ ೭ ॥ ಸಂಕಟದವಮೂಲವನು ಮುರಿಯುವ ಶಂಕರಾರ್ಯನಬಿಟ್ಟ ಪರಿಪರಿ । ಶಂಕೆಯಿಂಪ್ರಾಣದೇಭವ । ಪಂಕದಲಿ ಮುಳುಗಿರುವ ಭವಿಗಳ ॥ ೮ ॥

೭೫

ಜ್ಞಾನವೊಂದೇಸಾಕು ಮುಕ್ತಿಗೆ ಎಂಬಂತೆ

ಮರದಲಿ ಕೈಲಾಸವನು ನೋಡಿ । ನರಜೀವರಾಗಿಯು । ನರಕ ಮಾರ್ಗವಕೂಡಿ ಕೆಡಬೇಡಿ ॥ ಪಲ್ಲವಿ ॥

ಧರಿಸಿನಿಯಮವಬಾಡಿದಿರಿ ಪುರ । ಹರನಪೂಜೆಯುಮಾಡಿದಿರಿ ತನು । ದುರಿತಗಳ ನೀಗಾಡಿದಿರಿ ಸು । ಸ್ಥಿರದಮುಕ್ತಿಯುಬೇಡಿದಿರಿನೀವ್ । ಮರಣದಲಿ ಕೈಲಾಸ ॥ ಅನುಪಲ್ಲವಿ ॥

ವರಿಸಿ ಕನ್ಯಾದಾನಗಳಮಾಡಿ । ಸ್ನಾನಗಳಮಾಡುತ । ಚರಿಸಿನಾನಾ ಕ್ಷೇತ್ರಗಳನೋಡಿ । ದುರಿತ ತೊಲಗಿತುಧನ್ಯರಾದಿರಿ । ಹರನಲೋಕನಿವಾಸರಾದಿರಿ ॥ ಮರಳಿಸಂಕಲ್ಪವನುಮಾಡದೆ । ನರಕಮಾರ್ಗಪ್ರೇತರಾಗದೆ ॥ ಮ ॥ ॥ ೧ ॥ ಸತ್ಕಥಾಶ್ರವಣಾದಿಗಳಮಾಡಿ । ಶಿವರಾತ್ರಿಮೊದಲಾದುತ್ತಮವ್ರತ ಪುಣ್ಯಗಳಕೂಡಿ । ಚಿತ್ತವಿದುಪರಿಶುದ್ಧವಾಯಿತು । ಮೃತ್ಯುಮಾರ್ಗವುದೂರವಾಯಿತು । ಕತ್ತಲೆಯುಮಾತುಗಳಕೇಳದೆ ಮತ್ತುವೈತರಣಿಯಲಿಬೀಳದೆ ॥ ೨ ॥

ಸಂಕಟದಿ ಸಾಯುವರು ಮಾನವರು । ದರ್ಭೆಗಳಪಿಡಿದೆಮ । ಕಿಂಕರು ಪುರಗಳನು ಸೇರಿದರು । ಕಿಂಕರರಮಾಡುವರುಬಹುವಿಧ । ಶಂಕೆಗಳಹೆಚ್ಚಿಸುತ ನರಕದ ಬೆಂಕಿಯಲಿಮುಳುಗಿಸುವರದರಿಂ । ಶಂಕರಾರ್ಯನಪದವಭಜಿಸುತ ॥ ಮರಣದಲಿಕೈಲಾಸವನುನೋಡಿ ॥ ೩ ॥

ಮಂಗಳಾರತಿತಂದುಬೆಳಗೇ । ನಮ್ಮ । ಲಿಂಗದೇಹದನಾಯಕಗೆ । ಕಂಗಳಿಂದೃಶ್ಯದೊಳು । ಸಂಗವಾಗಲ್ಕೆಬಹಿರಂಗದಲಿಕೂಡಿದ ವಿವಿ । ಧಾಂಗವಾಗಿರುವನಿಗೆ ॥ ಪಲ್ಲವಿ ॥

ಕಣ್ಣಿಲ್ಲದವನಾಗಿ ಜನಿಸಿ । ಬಹು । ಕಣ್ಣಾಗಿಜಗವನಾವರಿಸಿ । ಮಣ್ಣಿನಂಗಿಯುಧರಿಸಿ ಬಣ್ಣವದರೊಳಗಿರಿಸಿ ಸಣ್ಣವನುಯೆನಿಸುತಾ । ಬಣ್ಣಗೆಟ್ಟಿರುವನಿಗೆ ॥ ೧ ॥ ಲಾಲವಿಲ್ಲದೆ ಮೂಡಿದವಗೇ । ಯೆಲ್ಲಮೂಲೆಯೋಳ್ ತುಂಬಿ ತುಳುಕುವಗೆ ॥ ಕಾಲಕರ್ಮದೊಳಾಡಿ ಮಾಲೆಯುಂತದಮಾಡಿ । ಪಾಳುಮನೆ

ಯೊಳುದೀಪ । ಜ್ವಾಲೆಯುಂತಿರುವನಿಗೆ ॥ ೨ ॥ ಮರೆತುತನ್ನನು ತಿರುಗುವನಿಗೆ ತನ್ನ ॥ ನರಿತೊಡೆ ಜಗವನುಂಗುವಗೆ । ಗುರುಶಂಕರಾರ್ಯನೊಳ । ಗೆರಕತನ ಗುಂಟಾಗೆ । ಪರಿಪೂರ್ಣನಾಗಿತುಂಬಿರುವ ನಿಶ್ಚಲನಿಗೆ ॥ ೩ ॥

ಇತಿ ಶ್ರೀಮದಧ್ಯಾತ್ಮ ವಿದ್ಯಾಮೂರ್ತಿ ಜನನಮರಣಹರಣ ಪ್ರವೀಣ
ಕೀರ್ತಿ ಶ್ರೀಮದ್ಗುರುಶಂಕರ ಚರಣಕಮಲ ಪರಾಗಭಾಸುರಪಾಲ
ಶಿವರಾಮನಾಮಕ ಶಂಕರದಾಸ ವಿರಚಿತ
**ಶಂಕರಾನಂದ ಪದ್ಧತಿ ೭೬ಕ್ಕೆ ಸಂಪೂರ್ಣವು**

---

## ವೇದಾಂತ ಶಿವರಾಮಶಾಸ್ತ್ರಿಯವರಿಂದ ರಚಿತವಾದ
## ವೇದಾಂತ ಗ್ರಂಥಗಳು

| | | |
|---|---|---|
| ಶಂಕರಾನಂದ ತತ್ವ | ರೂ. | 1–50 |
| ಶಂಕರಾನಂದ ಪದ್ಧತಿ | | 1–50 |
| ಶಂಕರಾನಂದ ಕಂದ | | 1–00 |
| ಪಾರಮಾರ್ಥಸಾರ | | 1–00 |
| ಶಂಕರಬೋಧಾಮೃತ | | 1–00 |
| ವೇದಾಂತ ಜ್ಞಾನರತ್ನಪ್ರಭಾ | | 1–50 |
| ಸನ್ಯಾಸಿ ಲಕ್ಷಣ | | 1-00 |
| ಬ್ರಹ್ಮಾನಂದ ಬೋಧೆ | | 2–50 |

ನಮ್ಮ ವಿಳಾಸ:

ಎಂ. ಗೋಪಾಲಶೆಟ್ಟಿ ಸನ್ಸ್

ಶ್ರೀ ಶಂಕರಾನಂದ ಬುಕ್ ಡಿಪೊ

"ಶಾಂತಿನಿವಾಸ್"

೭ನೆ ಕ್ರಾಸ್ ಹೊಸಕೇರಿ ಮೈಸೂರು ೪